# ಒಡಲಾಳ

ಸೆಪ್ಟೆಂಬರ್–ಅಕ್ಟೋಬರ್ ೧೯೯೨
ಸಂಪುಟ : ೨ ಸಂಚಿಕೆ : ೫

---



---

ಸಂಪಾದಕ : ಕೃಷ್ಣಮೂರ್ತಿ ಬಿಳಿಗೆರೆ

**ಎಲ್. ಹನುಮಂತಯ್ಯ,** ೩೦೧, ೫ ನೇ ಮ್ಯೆನ್, ರಾಜಾಜಿನಗರ.
ಕೈಗಾರಿಕಾ ನಗರ, ಬೆಂಗಳೂರು - ೫೬೦ ೦೪೪.

**ಟಿ. ಎಂ. ಷಡಕ್ಷರಿ,** ಜನರಲ್ ಆಸ್ಪತ್ರೆ, ವಾರ್ಡ್ ನಂ. ೧
ತಿಪಟೂರು – ೫೭೨ ೨೦೨.

**ಬರಗೂರು ರಾಮಚಂದ್ರಪ್ಪ,** ೫೮ ಮಹಡಿ. ರಿಜರ್ವಾಯರ್ ರಸ್ತೆ
ಬಸವನಗುಡಿ, ಬೆಂಗಳೂರು – ೫೬೦ ೦೦೪.

**ಸಿ. ಎಸ್. ನಾಗರಾಜು,** ಇಂಗ್ಲೀಷ್ ಅಧ್ಯಾಪಕರು,
ಸರ್ವೋದಯ ಪದವಿ ಪೂರ್ವ ಕಾಲೇಜ್, ತಿಪಟೂರು.

**ದತ್ತಣ್ಣ, ಉರುಫ್ ದತ್ತಪ್ರಕಾಶ್,** ಇಂಗ್ಲೀಷ್ ಅಧ್ಯಾಪಕರು,
ಪದವಿ ಪೂರ್ವ ಕಾಲೇಜು, ನಿಟ್ಟೂರು.

**ಎನ್. ನಾಗಪ್ಪ,** ಕನ್ನಡ ಅಧ್ಯಾಪಕರು,
ಸರ್ಕಾರಿ ಪದವಿ-ಪೂರ್ವ ಕಾಲೇಜು, ಚಿಕ್ಕನಾಯ್ಕನಹಳ್ಳಿ.

**ಶಾಮಸುಂದರ ಕೋಚಿ,** ಕನ್ನಡ ಅಧ್ಯಾಪಕರು,
ಸರ್ಕಾರಿ ಕಲಾ ಕಾಲೇಜು, ತುಮಕೂರು.

**ಕೆ. ಎಸ್. ನಾಗರತ್ನ,** ಲೇಖಕಿ ತುಮಕೂರು.

**ಪಿ. ಮಂಜುನಾಥ್,** ಪ್ರಧಾನ ಅಂಚೆ ಕಛೇರಿ ರಸ್ತೆ, ತಿಪಟೂರು.

**ಗಿರಿಯಜ್ಜ** C/o ಒಡಲಾಳ

**ಹೆಚ್. ಎಲ್. ಪುಷ್ಪ,** ಕನ್ನಡ ಅಧ್ಯಾಪಕಿ
ಸರ್ಕಾರಿ ಪದವಿ-ಪೂರ್ವ ಕಾಲೇಜು, ಬಸವನಗುಡಿ
ಬೆಂಗಳೂರು - ೫೬೦ ೦೪೦.

# ಹಿಂಸೆ-ಅಹಿಂಸೆಯ ನಡುವೆ

ಹಿಂದು ಸಮಾಜವನ್ನು ಪರಂಪರೆಯ ಮೂಲದಿಂದಲೂ ಗಮನಿಸಿದವರಿಗೆ, ಆಂತರಿಕ ಸಂಘರ್ಷದಿಂದಲೇ ತೊಳಲಾಡುತ್ತಾ ಅವನತಿಯ ಹಾದಿಯತ್ತಲೇ ಸಾಗುತ್ತಾ ಬಂದಿರುವುದು ನಿರ್ವಿವಾದವೆಂದು ನನ್ನ ನಂಬಿಕೆ. ಸ್ಥೂಲವಾಗಿ ಈ ಸಮಾಜವನ್ನು 'ಸ್ಪೃಶ್ಯ' ಮತ್ತು 'ಅಸ್ಪೃಶ್ಯ' ಸಮಾಜಗಳೆಂದು ವಿಭಾಗಿಸಬಹುದು. ಸ್ಪೃಶ್ಯ ಮತ್ತು ಅಸ್ಪೃಶ್ಯ ಸಮಾಜ ಹೊರನೋಟಕ್ಕೆ ಒಂದೇ ಆಗಿ ಕಂಡರೂ ಆಂತರಿಕವಾಗಿ ಸದಾ ಸಂಘರ್ಷದ ದಾರಿಯಲ್ಲೇ ನಡೆದು ಬಂದಿರುವುದನ್ನು ಯಾರೂ ಅಲ್ಲಗೆಳೆಯಲಾರದೆಂದೇ ನನ್ನ ಭಾವನೆ. ಇಂಥ ಸಮಾಜವೊಂದು 'ಹಿಂಸೆ'ಯನ್ನು ತನ್ನ ಅಂತರ್ಯದಲ್ಲೇ ಅಡಗಿಸಿಟ್ಟುಕೊಂಡಿರುತ್ತದೆ. ನಾವೆಷ್ಟೇ 'ಅಹಿಂಸೆ'ಯ ಶಂಖ ಊದಿದರೂ ಹಿಂಸೆ ವಾಸ್ತವವಾಗಿರುತ್ತದೆ. ಹಿಂಸಾತ್ಮಕ ಸಮಾಜವನ್ನು ಕಂಡ ರಾಜ ಸಿದ್ಧಾರ್ಥ ಬದಲಾಗಿ ಅಹಿಂಸಾತ್ಮಕ ಶೋಷಣೆರಹಿತ, ಸಮಾಜ ನಿರ್ಮಾಣಕ್ಕೆ ಶ್ರಮವಹಿಸಿ ಸ್ಥಾಪಿಸಿದ ಬೌದ್ಧ ಧರ್ಮವನ್ನು ನಾಶಮಾಡಲು ಹಿಂದೂ ರಕ್ಷಕರಾದ ಶಂಕರಾಚಾರ್ಯರು ಅನುಸರಿಸಿದ ಮಾರ್ಗಗಳು ಕೆಲವು ಉದಾಹರಣೆಗಳಷ್ಟೆ.

"ಶಂಕರಾಚಾರ್ಯರು ಶೂದ್ರರಿಗೆ ಜ್ಞಾನವನ್ನು ನಿರಾಕರಿಸಿದ್ದಷ್ಟೇ ಅಲ್ಲ. ಅವರು ಮಾಡಿದ ಮಹಾಪರಾಧವೆಂದರೆ ತಮ್ಮ ಸಿದ್ಧಾಂತಕ್ಕೆ ಬೃಹತ್ ಪ್ರಮಾಣದಲ್ಲಿ ಎದುರಾದ, ಬಲವಾಗಿ ಬೇರೂರಿದ್ದ ಬೌದ್ಧ ಧರ್ಮವನ್ನು ನಾಶಮಾಡಲು ಅವರು ತುಂಬ ಅನಾಗರಿಕ, ಅಸಂಸ್ಕೃತ, ಬರ್ಬರ, ಹೇಯ ವಿಧಾನಗಳನ್ನು ಅನುಸರಿಸಿದರು. ಬೌದ್ಧಧರ್ಮದ ಒಂದು ಗಟ್ಟಿ ನೆಲೆಯಾಗಿದ್ದ ನಾಗಾರ್ಜುನಕೊಂಡವನ್ನು ತಮ್ಮ ಅಸಂಖ್ಯಾತ ಅನುಯಾಯಿಗಳ ಜೊತೆ ಹೋಗಿ ತಮ್ಮ ಮೇಲ್ವಿಚಾರಣೆಯಲ್ಲೇ ಧ್ವಂಸಪಡಿಸಿದರು. ಬೌದ್ಧರು, ಬೌದ್ಧ ವಿಗ್ರಹಗಳು, ಸ್ತೂಪಗಳು, ಸ್ಮಾರಕಗಳನ್ನು ನಿರ್ನಾಮ ಮಾಡಿದರೆಂದು ನಾಗಾರ್ಜುನಕೊಂಡದಲ್ಲಿ ಮೊಟ್ಟ ಮೊದಲಿಗೆ ಭೂಶೋಧನೆ ನಡೆಸಿದ, ಭಾರತ ಮತ್ತು ಸಿಲೋನಿನ ಪ್ರಾಚ್ಯಶಾಸ್ತ್ರ ಇಲಾಖೆಯ ಮಹಾನಿರ್ದೇಶಕರಾಗಿದ್ದ ಎ. ಎಚ್. ಲಾಂಗ್‌ಹರ್ಸ್ಟ್ **ನಾಗಾರ್ಜುನಕೊಂಡದ ಬೌದ್ಧಾವಶೇಷಗಳು** ಎಂಬ ತಮ್ಮ ಅಮೂಲ್ಯ ಸಂಶೋಧನ ಗ್ರಂಥದಲ್ಲಿ ದಾಖಲು ಮಾಡಿದ್ದಾರೆ.

'ಶಂಕರಾಚಾರ್ಯ ಮತ್ತು ಪ್ರತಿಗಾಮಿತನ' ಎಂಬ ತಮ್ಮ ಪುಸ್ತಕದಲ್ಲಿ ಕೆ. ಎಸ್. ಭಗವಾನ್ (ಪುಟ ೨೧,ಪ್ಯಾರ ೨) "ಹಿಂಸೆ, ಗೂಂಡಾಗಿರಿ, ಪರಮತದ್ವೇಷ, ಸ್ವಾರ್ಥಪರತೆ, ಕಪಟ(ಧರ್ಮವೆಂದರೆ ವ್ಯವಸ್ಥಿತ ಮೋಸಗಾರಿಕೆ) ಭಾರತೀಯ ಸಂಸ್ಕೃತಿಯ ಕೆಲವು ಒಳಗುಟ್ಟುಗಳೆಂದು ಹೇಳದೆ ವಿಧಿಯಿಲ್ಲ. ಅವಿದ್ಯಾವಂತರೋ, ಅನಾಗರಿಕರೋ ಮಾಡಿದ್ದರೆ ಅದನ್ನು ಅವಿವೇಕವೆಂದು ತಳ್ಳಿಹಾಕಬಹುದಿತ್ತು. ಆದರೆ ಗೂಂಡಾಗಿರಿ ಮತ್ತು ಪರಮತ ದ್ವೇಷ ಆಚರಿಸಿದವರು ಅದ್ವೈತಿಯಾದ ಶಂಕರಾಚಾರ್ಯರು. ಜನರಿಗೆ ಮಾದರಿಯಾಗಬೇಕಾಗಿದ್ದ ಮಹಾರಾಜ ಹರ್ಷ.

ಆದ್ದರಿಂದಲೇ ಹಿಂಸಾಚಾರ ಕಾಲ ಧರ್ಮವಾಗಿಬಿಟ್ಟಿದೆ" ಎಂದು ಬರೆದಿದ್ದಾರೆ. ಇಂಥ ಅನೇಕ ಉದಾಹರಣೆಗಳನ್ನು ನಾವು ನೀಡಬಹುದು.

ನಾನು ಹೇಳಬೇಕೆಂದಿರುವುದು "ಹಿಂಸೆ" ಸಮಾಜದ ಒಡಲಿನ ಹೊರಣವಾಗಿದೆ ಎಂದು. ಭಾರತದ ಗ್ರಾಮೀಣ ಸಮಾಜ ಮೂಲದಿಂದಲೂ ಬರ್ಬರತೆಯ ಪ್ರದರ್ಶನ ನಡೆಸುತ್ತಾ ಬಂದಿದೆ. ಭಾರತೀಯ ಗ್ರಾಮೀಣ ಸಮಾಜದ ಕ್ರೌರ್ಯಕ್ಕೆ ಬಲಿಪಶುಗಳು ದಲಿತರು ಅಥವಾ ಅಸ್ಪೃಶ್ಯರು. ಸ್ಪೃಶ್ಯ ಸಮಾಜದ ಕ್ರೌರ್ಯಕ್ಕೆ ಅಸ್ಪೃಶ್ಯ ಸಮಾಜದ ಸಾರಾಸಗಟು ಹೇಗೆ ಬಲಿಯಾಗಿದೆ ಎಂಬುದನ್ನು ಅನೇಕ ಉದಾಹರಣೆಗಳನ್ನು ಗಮನಿಸಬಹುದು.

ಎಡಪಂಥೀಯ ವಿಚಾರಧಾರೆ ಗ್ರಾಮೀಣ ಸಮಾಜವನ್ನು ಭೂಮಾಲೀಕ ಸಮಾಜವೆಂದು ವಿಶ್ಲೇಷಣೆ ಮಾಡುತ್ತದೆ. ಸಾವಿರಾರು ಎಕರೆ ಜಮೀನಿರುವ ಭೂಮಾಲೀಕತ್ವದ ಪದ್ಧತಿ ನಮ್ಮ ಸಮಾಜ ವ್ಯವಸ್ಥೆಯನ್ನು ನಿಯಂತ್ರಿಸುತ್ತದೆ. ಅಂಬೇಡ್ಕರ್, ಲೋಹಿಯಾ ಮುಂತಾದವರು ಜಾತಿಯೇ ವರ್ಗವಾಗಿದೆಯೆಂದು ಹೇಳಿದ್ದಾರೆ. ಜಾತಿ ಶೋಷಣೆಯೇ ವರ್ಗ ಶೋಷಣೆಯಾಗಿ ಮಾರ್ಪಟ್ಟಿದೆಯೆಂದು ಅಭಿಪ್ರಾಯಪಟ್ಟಿದ್ದಾರೆ. ಭಾರತೀಯ ಜಾತಿ ವ್ಯವಸ್ಥೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಅಷ್ಟೇ ಅಲ್ಲ, ಶೂದ್ರ ಸಮಾಜ ಛಿದ್ರ ಛಿದ್ರವಾಗಿರುವುದು ಅದರಾಚೆ ಪಂಚಮರಿರುವುದು ವಾಸ್ತವ. ಅಂಬೇಡ್ಕರ್ ದಲಿತರ ಮುಖ್ಯ ಶತ್ರುಗಳನ್ನು ಗುರುತಿಸುವಾಗ ಎರಡು ಅಂಶಗಳನ್ನು ಗುರುತಿಸುತ್ತಾರೆ. 1)ಬ್ರಾಹ್ಮಣ ಶಾಹಿ 2)ಬಂಡವಾಳ ಶಾಹಿ. ಮತ್ತಷ್ಟು ಸರಳವಾಗಿ ಹೇಳುವುದಾದರೆ ಹಸಿವು ಮತ್ತು ಅಸ್ಪೃಶ್ಯತೆ. ಹಸಿವು ಬಂಡವಾಳಶಾಹಿಯ ಕೊಡುಗೆಯಾದರೆ ಅಸ್ಪೃಶ್ಯತೆ. ಬ್ರಾಹ್ಮಣ ಶಾಹಿಯ ಕೊಡುಗೆಯಾಗಿದೆ. ಈ ಎರಡನ್ನು ಎದುರಿಸಿ, ಸಮಾಜದಲ್ಲಿ ಬದಲಾವಣೆ ತರಬೇಕಾದರೆ ಸಂಘರ್ಷ ಅನಿವಾರ್ಯವಾದದ್ದೆಂದು ಅಂಬೇಡ್ಕರ್ ಒಪ್ಪುತ್ತಾರೆ. ಆದರೂ ಅಹಿಂಸೆಯ ಅತಿಯಾದ ಒಲವಿನಿಂದ, ಆಧ್ಯಾತ್ಮಿಕತೆಯ ಆದರ್ಶದಿಂದ ಬೌದ್ಧ ಧರ್ಮವನ್ನು ಒಪ್ಪುತ್ತಾರೆ. ಅಹಿಂಸೆ ಆದರ್ಶವಾದರೆ, ಹಿಂಸೆ ವಾಸ್ತವವಾಗಿದೆ. (ಅಂಬೇಡ್ಕರ್ ಅವರ ಮತಾಂತರ ಪ್ರತ್ಯೇಕ ಚರ್ಚೆಯ ವಸ್ತು).

ಹಿಂಸೆಗೆ ಅನೇಕ ಆಯಾಮಗಳಿವೆ, ಮಾನಸಿಕ, ದೈಹಿಕ, ವಸಾಹತುಶಾಹಿ ಇತ್ಯಾದಿ. ಸಂಕ್ರಮಣ ಸ್ಥಿತಿಯಲ್ಲಿರುವ ಸಮಾಜವೊಂದು ಸಂಘರ್ಷದ ಮೂಲಕವೇ ಸುಸ್ಥಿತಿಯನ್ನು ತಲುಪಬೇಕಾಗಿದೆ. ಊಳಿಗಮಾನ್ಯ ಪದ್ಧತಿಯಿಂದ ಬಂಡವಾಳಶಾಹಿ ಪದ್ಧತಿಗೆ ಬಂದ ಸಮಾಜ, ಅನೇಕ ಬದಲಾವಣೆಗಳನ್ನು ಕಾಣಬೇಕಾಯಿತು. ಈ ಬದಲಾವಣೆಯನ್ನೇ ಸಮಾಜ ಬದಲಾವಣೆ ಅಥವಾ 'ಕ್ರಾಂತಿ'ಯೆಂದು ಅರ್ಥೈಸಿದವರೂ ಇದ್ದಾರೆ. ಆದರೆ ಇದು ಪ್ರಾಕೃತಿಕ ಬದಲಾವಣೆಯೇ ಹೊರತು, ಕ್ರಾಂತಿ ಅಲ್ಲ. ಇಂಥ ಬದಲಾವಣೆಗಳಿಂದ ಸಮಾಜ ಒಂದು ವ್ಯವಸ್ಥೆಯಿಂದ ಬೇರೊಂದು ವ್ಯವಸ್ಥೆಗೆ ವರ್ಗಾಯಿಸಲ್ಪಟ್ಟಿದೆ. ಅಂಥ ಸಂದರ್ಭವೇ ಸಾಮಾಜಿಕ

ಸಂಘರ್ಷವನ್ನು ಉಂಟುಮಾಡುತ್ತದೆ. ಈ ಸಂಘರ್ಷ ಅನಿವಾರ್ಯ ಮತ್ತು ಅಗತ್ಯವಾಗಿರುತ್ತದೆ. ಆದ್ದರಿಂದ ಮಾರ್ಗ ಅನಿವಾರ್ಯವಾದುದಾಗಿದೆ. ಆದರೂ ಸವರ್ಣೀಯರ ಮನಃ ಪರಿವರ್ತನೆಯಿಲ್ಲದೆ ದಲಿತರಿಗೆ ಸಾಮಾಜಿಕ ನ್ಯಾಯ ದಕ್ಕಲಾರದು.

ಮನ ಪರಿವರ್ತನೆಯೆಂಬುದು ಗಾಂಧೀವಾದದ ಪರಿಕಲ್ಪನೆಯಿಂದ ಹುಟ್ಟಿದ್ದು. ಗಾಂಧೀಜಿ ಮೂಲಭೂತವಾಗಿ ಈ ನಂಬಿಕೆಯುವರು ಮತ್ತು ಪ್ರಾಮಾಣಿಕವಾಗಿ ತಮ್ಮ ನಂಬಿಕೆಯ ಮೂಲಕವೇ ದಲಿತರ ಸಮಸ್ಯೆಯನ್ನು ಪರಿಹರಿಸಲು ಪ್ರಯತ್ನಿಸಿದವರು. ಹಿಂದೂ ಸಮಾಜದ ಮೌಲ್ಯಗಳನ್ನು ಗಾಂಧಿಯವರು ಅರ್ಥೈಸಿದ ರೀತಿಯೇ ಇದಾದ್ದರಿಂದ, ಅಂಥ ಸಿದ್ಧಾಂತಗಳ ಮೂಲಕ ಪರಿಹಾರವನ್ನು ನಿರೀಕ್ಷಿಸುವುದು ಮೂರ್ಖತನವಾಗುತ್ತದೆ. ಮಾರ್ಕ್ಸವಾದಿಗಳ ಜಾತಿ ಪದ್ಧತಿ ಕುರಿತ ಚಿಂತನೆ ಹೇಗೆ ವಾಸ್ತವಕ್ಕೆ ದೂರವಾಗಿದೆಯೋ ಹಾಗೆಯೇ ಗಾಂಧಿವಾದಿಗಳ ಮತ್ತು ಲೋಹಿಯಾ ಚಿಂತಕರ ಮನ ಪರಿವರ್ತನೆಯ ಹಾದಿಯೂ ಸತ್ಯಕ್ಕೆ ಹತ್ತಿರವಾದುದಲ್ಲ. ಹಿಂದೂ ಧರ್ಮವನ್ನು ಗಾಂಧೀಜಿ ಎಂದೂ ಅವೈಜ್ಞಾನಿಕವೆಂದು ಒಪ್ಪುವುದೇ ಇಲ್ಲ. ವರ್ಣಾಶ್ರಮ ಪದ್ಧತಿ, ಜಾತಿಪದ್ಧತಿ ಇರುವುದು ತಪ್ಪಲ್ಲ ಎನ್ನುತ್ತಾರೆ. ಆದರೆ ಅಸ್ಪೃಶ್ಯತೆ 'ಮಹಾಪಾಪ', ಅದನ್ನು ತೊಡೆದು ಹಾಕಬೇಕೆನ್ನುತ್ತಾರೆ. ಅಸ್ಪೃಶ್ಯರ ಜೊತೆ ಗೂಡುವುದು, ಅಸ್ಪೃಶ್ಯರ ಸ್ವಚ್ಛತೆ, ನೈರ್ಮಲ್ಯಗಳನ್ನು ಕಾಪಾಡಬೇಕು ಎನ್ನುವುದು, ಅಸ್ಪೃಶ್ಯರ ಬಗೆಗೆ ಸಮಾಜ ಕರುಣೆ, ಸಹಾನುಭೂತಿಯನ್ನು ಬೆಳೆಸಿ ಕೊಳ್ಳಬೇಕೆಂದು ಹೇಳುವುದನ್ನು ನೋಡಿದರೆ ದಲಿತರ ಮೇಲಿನ ದೌರ್ಜನ್ಯಗಳಿಗೆ, ಹಿಂಸೆ ಕ್ರೌರ್ಯಗಳಿಗೆ ಉತ್ತರ ಹುಡುಕಲಿಲ್ಲ. ಬಹುಶಃ ಅಂಬೇಡ್ಕರ್ ಮತ್ತು ಗಾಂಧಿ ಭಿನ್ನಾಭಿಪ್ರಾಯ ತಾಳಿದ್ದು ಇಂಥ ಮುಖ್ಯ ವಿಚಾರಗಳಲ್ಲಿ ಎಂದು ತಿಳಿಯುತ್ತದೆ.

**೨. ಸ್ವಾಭಿಮಾನ ಮತ್ತು ನಿರಾಕರಣೆ**

ದಲಿತರ ಮೇಲಿನ ದೌರ್ಜನ್ಯಗಳಿಗೆ ಕಾರಣಗಳನ್ನು ಹುಡುಕುವವರಿಗೆ, ದೌರ್ಜನ್ಯಗಳನ್ನು ಕುರಿತು ಅಧ್ಯಯನ ನಡೆಸಿದವರು ಕೆಲವು ಮುಖ್ಯ ಸಂಗತಿಗಳನ್ನು ಹೇಳುತ್ತಾರೆ.

೧. ಭೂ ಸಂಬಂಧಗಳು.

೨. ವಿದ್ಯೆ ಮತ್ತು ಕೈಗಾರಿಕೀಕರಣ.

೩. ಸಂಪ್ರದಾಯಸ್ಥ ಗ್ರಾಮೀಣ ಸಮಾಜ.

ದಲಿತರು ಭೂಮಿಯ ಸಂಬಂಧದಲ್ಲಿ ಪರಕೀಯರು. ಜಮೀನ್ದಾರರ ಜಮೀನಿನಲ್ಲಿ ಕೃಷಿ ಕೂಲಿಗಾರರಾಗಿ ದುಡಿಯುವವರು. ಇಂದಿಗೂ ಶೇಕಡವಾರು ಕೃಷಿ ಕೂಲಿಗಾರರ ಸಂಖ್ಯೆಯಲ್ಲಿ ದಲಿತರು ಹೆಚ್ಚಾಗಿ ಇರುವುದನ್ನು ಗಮನಿಸಿದರೆ ಈ ಸಮಸ್ಯೆಯ ಸತ್ಯ ತಿಳಿಯುತ್ತದೆ. ಭಾರತದ ಜಾತಿ ವ್ಯವಸ್ಥೆಯಲ್ಲಿ ಮಧ್ಯಮ ಜಾತಿಗಳು ಭೂಮಿಯನ್ನು ಹೊಂದಿರುವುದರಿಂದ ದಲಿತರು ನೇರವಾಗಿ ಮಧ್ಯಮ

ಜಾತಿಗಳ ಅಡಿಯಲ್ಲಿ ಬರುತ್ತಾರೆ. ಆದ್ದರಿಂದಲೇ ದಲಿತರ ಮೇಲೆ ನಡೆಯುತ್ತಿರುವ ದೌರ್ಜನ್ಯಗಳಲ್ಲಿ ಮಧ್ಯಮ ಜಾತಿಗಳು ಅರ್ಥಾತ್ ಭೂ ಮಾಲೀಕ ಜಾತಿಗಳು ನೇರ ಹೊಣೆಗಾರರಾಗಿದ್ದಾರೆ.

ಗ್ರಾಮೀಣ ಸಮಾಜವನ್ನು ವಿಶ್ಲೇಷಿಸುವ ಸಮಾಜ ಶಾಸ್ತ್ರಜ್ಞರು ಎಲ್ಲ ಜಾತಿಗಳ ಹೊಣೆಗಾರಿಕೆಯನ್ನು ಗುರುತಿಸಿದಾರೆ. ಬ್ರಾಹ್ಮಣ ಊರಿನ ಲೆಕ್ಕಿಗನಾದರೆ ಅವನ ಸೇವಕ ಕೆಳಜಾತಿಯ ಹೊಲೆಮಾದಿಗರವನಾಗಿರುತ್ತಾನೆ. ಊರಿನ ಪಟೇಲನಾಗಿ ಬ್ರಾಹ್ಮಣನ ನಂತರದ ಜಾತಿಯ ಭೂ ಮಾಲೀಕನಾಗಿರುತ್ತಾನೆ. ಇವನು ಕಂದಾಯ ಅಥವಾ ಕರ ವಸೂಲಿಗಾರನಾಗಿರುತ್ತಾನೆ. ಆದರೆ ಅದರ ಲೆಕ್ಕಪತ್ರ ಇಟ್ಟುಕೊಳ್ಳುವ ಶ್ಯಾನುಭೋಗ ಅಥವಾ ಕುಲಕರ್ಣಿ ಊರಿನ ಮತ್ತೊಬ್ಬ ಮುಖ್ಯಸ್ಥನಾಗಿರುತ್ತಾನೆ. ನಮ್ಮ ಹಳ್ಳಿಗಳು ಕೃಷಿ-ಪ್ರಧಾನವಾದ್ದರಿಂದ ಕೃಷಿಗೆ ಸಂಬಂಧಿಸಿದ ಕೆಲಸ ಮಾಡುವಲ್ಲಿ ಹಳ್ಳಿಯ ಅನೇಕ ಜಾತಿಗಳು ಪಾಲ್ಗೊಳ್ಳುತ್ತವೆ. ಕೂಲಿ ಕೆಲಸದಲ್ಲಿ ಮಾತ್ರ ತಮ್ಮನ್ನು ತೊಡಗಿಸಿಕೊಂಡ ದಲಿತರು ಭೂಮಿ ಇಲ್ಲದೆ ಉಳಿದರು. ಇದರ ಪರಿಣಾಮವಾಗಿಯೇ ದಲಿತರು ಸದಾ ಅವಲಂಬಿತ ಜನಾಂಗವಾದರು. ಈ ಪರಾವಲಂಬಿ ಬದುಕು ಅವರನ್ನು ಶೋಷಿತರಾಗುವಂತೆ ಮಾಡಿದೆ. ಈ ಪರಾವಲಂಬನೆ ಎಷ್ಟರಮಟ್ಟಿಗೆ ಬೇರೂರಿತೆಂದರೆ ಗ್ರಾಮೀಣ ಜನರ ಅಲಿಖಿತ ಶಾಸನವಾಯಿತು. ಈ ಕಾರಣದಿಂದಲೇ ತಲೆಮಾರುಗಳಿಂದ ಬಂದ ತಮ್ಮ ವೃತ್ತಿಯನ್ನು ಮಾಡುವುದಿಲ್ಲವೆಂದಾಗ ಘರ್ಷಣೆ ಪ್ರಾರಂಭವಾಯಿತು. ಈ ಘರ್ಷಣೆಯ ಪರಿಣಾಮವೇ ದಲಿತರ ಮೇಲಿನ ದೌರ್ಜನ್ಯವಾಗಿದೆ. ಇಂಥ ದೌರ್ಜನ್ಯಗಳ ಸ್ವರೂಪಗಳನ್ನು ಗಮನಿಸಿದರೆ ನಮಗೆ ಮತ್ತೆ ಕೆಲವು ಸತ್ಯಗಳು ತಿಳಿದು ಬರುತ್ತವೆ.

ಬಿಹಾರದ ಬೆಲ್ಚಿ ಗ್ರಾಮದಲ್ಲಿ ಕೃಷಿ ಕೂಲಿಗಾರರಾದ ದಲಿತರು ತಮಗೆ ಕೂಲಿಯನ್ನು ಹೆಚ್ಚು ಮಾಡಬೇಕೆಂದು ಕೇಳಿಕೊಂಡರು. ಕೂಲಿಯನ್ನು ಹೆಚ್ಚು ಮಾಡಿರೆಂದು ಕೇಳುವುದೇ ಮಹಾಪರಾಧವೆಂದು ಭಾವಿಸಿದ ಭೂಮಾಲೀಕರು ಇಡೀ ದಲಿತರ ಗುಡಿಸಲುಗಳನ್ನು ಸುಟ್ಟರು. ಹನ್ನೊಂದು ಜನ ದಲಿತರು ಸಜೀವ ದಹನವಾದರು. ಇಂಥದೇ ಕಾರಣಗಳಿಗೆ ಪಿಪ್ರಾ, ನಾರಾಯಣಪುರ, ಮುಂತಾದ ಕಡೆ ನಡೆದ ದಲಿತರ ಮೇಲಿನ ದೌರ್ಜನ್ಯಗಳು ಚರಿತ್ರೆಯಲ್ಲಿ ಅಳಿಸಲಾಗದ ಕಪ್ಪು ಚುಕ್ಕೆಗಳಾಗಿವೆ.

ಆಂಧ್ರಪ್ರದೇಶದ ಕರಮಚೇಡು ಘಟನೆ ಬಹಳ ಪ್ರಸಿದ್ಧವಾದದ್ದು. ಈ ಘಟನೆ ನಡೆಯಲು ಕಾರಣ ಬಹಳ ಕ್ಷುಲ್ಲಕವಾದದ್ದು ಮತ್ತು ಜಾತಿ ಪ್ರೇರಿತವಾದದ್ದು. ಊರಿನ ಕೆರೆಯ ಅಂಚಿನಲ್ಲಿ ದಲಿತ ಯುವಕನೊಬ್ಬ ತನ್ನ ಎಮ್ಮೆಗೆ ಮೈ ತೊಳೆದದ್ದೆ ಕಾರಣವಾಯಿತು. ಆ ದಿನ ರಾತ್ರಿ ಇಡೀ ಕೇರಿಯನ್ನು ಧ್ವಂಸ ಮಾಡಲಾಯಿತು.

ಮನೆ ಗುಡಿಸಲುಗಳಿಗೆ ಬೆಂಕಿ ಹಚ್ಚಿ, ಮನೆಯ ಒಳಗಿದ್ದ ಸಾಮಾನುಗಳನ್ನು ಹೊರಗೆ ಎಸೆದು ಸಣ್ಣ ಪುಟ್ಟ ಮನೆ ಬಳಕೆಯ ಸಾಮಾನುಗಳನ್ನು ಪುಡಿ ಪುಡಿ ಮಾಡಲಾಯಿತು. ಎಲ್ಲಕ್ಕಿಂತಲೂ ಹೆಚ್ಚಾಗಿ ದಲಿತ ಮಹಿಳೆಯರ ಮೇಲೆ ನಡೆದ ಅತ್ಯಾಚಾರ ಅಮಾನೀಯವಾದುದೆಂದು ಪ್ರತ್ಯಕ್ಷದರ್ಶಿ ವರದಿಗಳು ಹೇಳಿವೆ.

ಕರ್ನಾಟಕದ ಹಳ್ಳಿಗಳಲ್ಲಿ ಇತ್ತೀಚೆಗೆ ನಡೆದ ಘಟನೆಗಳ ವಿವರ ನೋಡಿ : ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ "ಅಮೃತೂರು ಘಟನೆ" ದಲಿತರು ಊರಿನ ಜಾತ್ರೆಯಲ್ಲಿ ದೇವರು ದಲಿತರ ಕೇರಿಗೆ ಬರಬೇಕೆಂದು ಕೇಳಲಾಗಿ ಘರ್ಷಣೆಯಾಯಿತು. ದೇವಾಲಯ ಪ್ರವೇಶ ಬೇಕು ಎಂಬ ಅವರ ಹಕ್ಕು ಅವರ ಕುತ್ತಿಗೆಗೆ ಹಗ್ಗವಾಯಿತು. ಬಳ್ಳಾರಿಯ ಸಂಗನಕಲ್ ಗ್ರಾಮದಲ್ಲಿ ೧೩೫ ಗುಡಿಸಲು ಭಸ್ಮವಾಗಲು, ದಲಿತರು ತಮ್ಮ ಆಸ್ತಿ ಪಾಸ್ತಿಗಳನ್ನು ಕಳೆದುಕೊಳ್ಳಲು ಹೋಟೆಲೊಂದಕ್ಕೆ ನೀರು ಕುಡಿಯಲು ಹೋಗಿದ್ದು ಕಾರಣವಾಯಿತು. ಊರಿನ ನಾಟಕವೊಂದರಲ್ಲಿ ಸವರ್ಣಿಯ ವ್ಯಕ್ತಿಯೊಬ್ಬನ ಕಾಲುಗಳನ್ನು ದಲಿತರ ವ್ಯಕ್ತಿ ಕಾಣದೆ ತುಳಿದದ್ದು ಮೂಲ ಕಾರಣವಾಗಿತ್ತು. ಅಳಂದದ ಹಂಗರಗ ಗ್ರಾಮದಲ್ಲಿ ದಲಿತರು ಹೋಟೆಲ್ ಪ್ರವೇಶ ಕೇಳಿದ್ದು, ಅಸ್ಪೃಶ್ಯತೆ ಆಚರಣೆಯ ಸಂಬಂಧ ದೂರು ನೀಡಿದ್ದು ಕಾರಣವಾಗಿದೆ. ಇದರ ಪರಿಣಾಮವಾಗಿಯೇ ಅಂಬೇಡ್ಕರ್ ಜಯಂತಿ ಮಾಡಿದ ದಲಿತರು ಊರಿನಲ್ಲಿ ಮೆರವಣಿಗೆ ಹೊರಟ ಪರಿಣಾಮವಾಗಿಯೇ "ಶಿವಸೇನೆ" ಕಟ್ಟಲಾಯಿತು. ಆ ಹೆಸರಲ್ಲಿ ದೌರ್ಜನ್ಯ ಮಾಡಲಾಯಿತು.

ತುಮಕೂರಿನ ಬೆಂಚಿ ಗ್ರಾಮದಲ್ಲಿ ದಲಿತರು ಕಾಲಾನು ಕಾಲದಿಂದ ಬಂದ "ಸೆರಗು" ನಿರಾಕರಣೆ ಅವರು ಬಯದಿಂದ ತತ್ತರಿಸುವಂತೆ ಮಾಡಿತು. ಇಂಥ ಲಕ್ಷಾಂತರ ಉದಾಹರಣೆಗಳಾಗಿರುವ ಘಟನೆಗಳು ನಮ್ಮ ಮುಂದಿವೆ. ಈ ಘಟನೆಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದಾಗ ತಿಳಿಯುವ ಸತ್ಯ ಮೇಲೆ ನಾವು ಗುರುತಿಸಿದ ಸಂಗತಿಗಳೇ ಆಗಿವೆ.

ಅದೇನೆಂದರೆ, ದಲಿತರಿಗೆ ವಿದ್ಯಾಭ್ಯಾಸ ಬರುವ ಮೂಲಕ ಸ್ವಾಭಿಮಾನ ಜಾಗೃತವಾಯಿತು. ಸ್ವಾಭಿಮಾನದಿಂದ ಸಾವಿರಾರು ವರ್ಷಗಳಿಂದ ತಾವು ಮಾಡಿಕೊಂಡು ಬರುತ್ತಿದ್ದ ಮತ್ತು ಕೀಳೆಂದು ಪರಿಗಣಿಸಲ್ಪಟ್ಟ ವೃತ್ತಿಗಳನ್ನು ಮಾಡುವುದಿಲ್ಲವೆಂದು ನಿರಾಕರಿಸಿದರು. ಈ "ನಿರಾಕರಣೆ" ಮತ್ತು "ಸ್ವಾಭಿಮಾನ" ಇಂದು ದೌರ್ಜನ್ಯಕ್ಕೆ ಕಾರಣಗಳಾಗಿವೆ. ಧರ್ಮವನ್ನು ಪೂರ್ಣವಾಗಿ ತ್ಯಜಿಸಲು ಸಾಧ್ಯವಾಗದ ದಲಿತರು ಹಿಂದೂಧರ್ಮದ ದೇವರುಗಳನ್ನೂ ಪೂಜಿಸಲು ತಾವು ಸಮಾನ ಅವಕಾಶವನ್ನು ಕೇಳುತ್ತಿದ್ದಾರೆ. ದೇವಸ್ಥಾನಗಳಿಗೆ ಪ್ರವೇಶಬೇಕೆಂದು ಹೇಳುತ್ತಿದ್ದಾರೆ. ಗ್ರಾಮೀಣ ಸಮಾಜ ಸಂಪ್ರದಾಯಸ್ಥ ಸಂಕೋಲೆಯಿಂದ ಹೊರ ಬರಲಾಗದಿರುವುದರಿಂದ ದಲಿತರ ಹಕ್ಕುಗಳಿಗೆ ಮಾನ್ಯತೆ ಮಾಡಲು ತಯಾರಾಗಿಲ್ಲ, ಸುಮಾರು ನಲವತ್ತು ವರ್ಷಗಳಷ್ಟು ಹಿಂದೆಯೇ ಸಂವಿಧಾನ ಸಮಾನತೆಯ ಘೋಷಣೆ ಮಾಡಿದ್ದರೂ ಗ್ರಾಮೀಣ ಜನತೆಗೆ ಇದರ ಬಿಸಿ ಸ್ವಲ್ಪವೂ ತಟ್ಟಿಲ್ಲ. ಇದನ್ನು ತಡೆಯಬೇಕಾದ ಪೋಲಿಸ್ ವ್ಯವಸ್ಥೆ ಸಂಪೂರ್ಣವಾಗಿ ಸೋತಿರುವುದನ್ನು ಅಂಕಿ ಅಂಶಗಳು ಹೇಳುತ್ತವೆ.

೫ ಒಡಲಾಳ

ಇತ್ತೀಚಿನ ಅಧ್ಯಯನವೊಂದರಿಂದ, ಕಳೆದ ಹತ್ತು ವರ್ಷಗಳಲ್ಲಿ ದಲಿತರ ಮೇಲೆ ನಡೆಯುತ್ತಿರುವ ದೌರ್ಜನ್ಯಗಳು ಮೂರು ಪಟ್ಟು ಜಾಸ್ತಿಯಾಗಿವೆಯೆಂದು ಸರ್ಕಾರವೇ ತಿಳಿಸಿದೆ. ದಲಿತರ ಮೇಲೆ ನಡೆದ ದೌರ್ಜನ್ಯಗಳಲ್ಲಿ ಶೇ. ೮೫ ರಷ್ಟು ನಿಜ ವೆಂದು ತನಿಖೆಯಿಂದ ಸಾಬೀತಾಗಿದೆ. ಶೇ.೩ ರಷ್ಟು ಮಾತ್ರ ತಪ್ಪಿತಸ್ಥರಿಗೆ ಶಿಕ್ಷೆಯಾಗಿ ರುವುದು ಕಂಡುಬರುತ್ತದೆ. ಇದು ಇಂಥ ದೌರ್ಜನ್ಯಗಳನ್ನು ಬಗೆಹರಿಸುವ ಕಾನೂನಿನಲ್ಲೇ ಇರಬಹುದಾದ ತೊಡಕನ್ನು ಸೂಚಿಸುತ್ತದೆ. ಅಂತೆಯೇ ವಿಚಾರಣೆ, ದೂರು ದಾಖ ಲೆಗಳಿಗೆ ಮಧ್ಯವರ್ತಿಗಳಾದ ಪೋಲಿಸ್ ವ್ಯವಸ್ಥೆ ಎಷ್ಟರಮಟ್ಟಿಗೆ ಕಾರಣರಾಗುತಾರೆ ನ್ನುವುದು ತಿಳಿದು ಬರುತ್ತದೆ.

ಹಳ್ಳಿಗಳಲ್ಲೇ ಹೆಚ್ಚು ಹೆಚ್ಚಾಗಿ ನಡೆಯುತ್ತಿರುವ ದೌರ್ಜನ್ಯಗಳಿಗೆ ಆ ವ್ಯವಸ್ಥೆಯು ಕೆಲವು ಕಾರಣಗಳಿರಬೇಕು. ಭಾರತದ ಗ್ರಾಮೀಣ ವ್ಯವಸ್ಥೆಯು ಕುಸಿ ಯುತ್ತಿದ್ದು, ಅಲ್ಲಿನ ಬದಲಾವಣೆಗೆ ಜನತೆ ಒಗ್ಗದಿರುವುದು ಪ್ರಮುಖವಾಗಿ ಕಾಣ ಬರುತ್ತದೆ. ಹಳ್ಳಿಗಳ ವೃತ್ತಿನಿರತ ಜಾತಿಗಳಾದ ಕುಂಬಾರ,ಅಗಸ,ಕ್ಷೌರಿಕ ಮುಂತಾದವರ ಬದಲಾವಣೆಗಳನ್ನು ಈ ನಿಟ್ಟಿನಲ್ಲೇ ಗಮನಿಸೋಣ. ಕುಂಬಾರರು ಸಂಪೂರ್ಣವಾಗಿ ಕೆಲಸವಿಲ್ಲದವರಾಗಿದ್ದಾರೆ. ನಗರೀಕರಣ ಬಂದಂತೆ ಹೊಸ ಹೊಸ ವೈಜ್ಞಾನಿಕ ಉಪಕರ ಣಗಳು ಬಳಕೆಗೆ ಬಂದಂತೆ ಕುಂಬಾರರ ವೃತ್ತಿ ನಿರ್ನಾಮವಾಯಿತು. ಕುಂಬಾರರು ತಮ್ಮ ವೃತ್ತಿಯ ಜೊತೆಗೆ ಕೃಷಿಯನ್ನು ಸ್ವಲ್ಪಮಟ್ಟಿಗೆ ಅವಲಂಬಿಸಿದ್ದರಿಂದ ಈಗ ಪೂರ್ಣ ಪ್ರಮಾಣದ ಕೃಷಿ ಆಧಾರಿತ ಕುಟುಂಬಗಳಾದವು. ಹಳ್ಳಿಗಳಲ್ಲಿದ್ದ ಕ್ಷೌರಿಕರು ಹಳ್ಳಿಯಲ್ಲಿ ತಮ್ಮ ವೃತ್ತಿ ಲಾಭದಾಯಕವಲ್ಲವೆನಿಸಿದಾಗ ಪಟ್ಟಣ ಮತ್ತು ನಗರಗಳಿಗೆ ವಲಸೆ ಬರಬೇಕಾಯಿತು. ಇಲ್ಲಿಯೂ ಅತೀವ ಸ್ಪರ್ಧೆಯಿಂದ ಸಂತೃಪ್ತ ಜೀವನ ನಡೆಸಲಾಗದೆ ಬದುಕುವ ಸ್ಥಿತಿಗೆ ತಲುಪಿದ್ದಾರೆ. ಮಡಿವಾಳರು ಕೂಡ ತಮ್ಮ ವೃತ್ತಿಯನ್ನು ತೊರೆದು ಕೆಲವರು ನಗರಗಳಿಗೂ ಮತ್ತೆ ಕೆಲವರು ಕೃಷಿಯನ್ನು ಅವಲಂಬಿಸ ಬೇಕಾಯಿತು.

ಆದರೆ ದಲಿತರ ಸ್ಥಿತಿ ಈ ರೀತಿಯದ್ದಲ್ಲ. ಧಾರ್ಮಿಕ ಮತ್ತು ಸಂಪ್ರದಾಯಸ್ಥ ವ್ಯವಸ್ಥೆಯ ಅವಿಭಾಜ್ಯ ಅಂಗವಾಗಿದ್ದ ದಲಿತರು ತಮ್ಮ ಕಸುಬನ್ನು ಬಿಡುತ್ತೇವೆಂದಾಗ ಗ್ರಾಮೀಣ ಸಮಾಜ ತಲ್ಲಣಗೊಳ್ಳುತ್ತದೆ. ಇಂಥ ಕಾರಣಗಳಿಗಾಗಿ ಘರ್ಷಣೆ ನಡೆಯುತ್ತದೆ. ಬಲಿಷ್ಠರಲ್ಲದ ದಲಿತರು ಅನಿವಾರ್ಯವಾಗಿ ದೌರ್ಜನ್ಯಕ್ಕೆ ಒಳಗಾಗುತ್ತಾರೆ.

ಸಂಪ್ರದಾಯಸ್ಥ ಗ್ರಾಮೀಣ ಸಮಾಜ ಜಾತ್ಯತೀತತೆಯ ಕಡೆಗೆ ಬರದೆ ಸಮಾಜ ಬದಲಾವಣೆ ಸಾಧ್ಯವಿಲ್ಲ. ಹಾಗೆಯೇ ಸಮಾಜದಲ್ಲಿನ ಹಿಂದೂ ವಾದದ ಶಕ್ತಿಗಳು ದಿನೇ ದಿನೇ ಹಿಂಸೆಯ ಕೂಪಕ್ಕೆ ನಮ್ಮನ್ನು ತಳ್ಳುತ್ತಿರುತ್ತವೆ. ಈ ಹಿಂಸೆಯ ಬಲಿಪಶುಗಳು ದಲಿತರಾಗಿದ್ದಾರೆ. ಆದ್ದರಿಂದ ಇಂಥ ಕ್ರೌರ್ಯದಿಂದ ಹೊರಬರ

ಏಕೆಂದರೆ ದಲಿತರಿಗೆ ಉಳಿದಿರುವ ದಾರಿ ಸಂಘಟನೆ ಮತ್ತು ಸಾಂಸ್ಕೃತಿಕ ಜಾಗೃತಿ. ಸಾಂಸ್ಕೃತಿಕ ಜಾಗೃತಿಯ ಮೂಲಕ ವಿಚಾರಶೀಲರಾಗಬೇಕು. ಸಂಘಟನೆಯ ಮೂಲಕ ಸಮಾಜವನ್ನು ಎದುರಿಸಬೇಕು.

# ಅಭಿವ್ಯಕ್ತಿ ಸ್ವಾತಂತ್ರ್ಯದ ರಕ್ಷಣೆಗೆ ಕರೆ

ದಿ. ೨೭-೧-೮೯ ರಂದು ನಾನು ಸಂಜೆ ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ 'ಭಾರತದಲ್ಲಿ ಸಾಂಸ್ಕೃತಿಕ ಸನ್ನಿವೇಶ' ಎಂಬ ಕುರಿತು ಫೌಂಡೇಶನ್ ಉಪನ್ಯಾಸ ಮಾಡಿದ್ದೆ ದೇಶದ ಅಪಾಯಕಾರಿ ವಿದ್ಯಮಾನಗಳ ಕುರಿತು ವಿಶ್ವವಿದ್ಯಾನಿಲಯದವರು ಸರ್ವಸಾಮಾನ್ಯವಾಗಿ ನಿರ್ಲಿಪ್ತರಾಗಿರುವುದನ್ನು ಕಂಡು ನಾನು ಬಹಳ ನಿರಾಶೆ ಪಡಬೇಕಾಯಿತು. ಆದರೆ ಈ ದಿನ ಸಂಜೆ 'ಇಪ್ಟಾ' ಮತ್ತು 'ಸಮುದಾಯ' ಮತ್ತು ಇತರ ಸಾಂಸ್ಕೃತಿಕ ತಂಡಗಳ ಕಾರ್ಯಕರ್ತರ ಕಾಳಜಿ, ಆಸಕ್ತಿಯನ್ನು ಗಮನಿಸಿದಾಗ ನನಗೆ ಅತ್ಯಂತ ಸಂತೋಷವಾಗುತ್ತದೆ ಮತ್ತು ಭವಿಷ್ಯದಲ್ಲಿ ಪುನಃ ಭರವಸೆ ಮೂಡುತ್ತದೆ.

ದೆಹಲಿಯಲ್ಲಿ ಇರುವವರು ತಮಗೆ ಪ್ರಪಂಚದ ಎಲ್ಲಾ ವಿಷಯಗಳು ಗೊತ್ತಿದೆ ಎಂದು ತಪ್ಪಾಗಿ ತಿಳಿಯುತ್ತಾರೆ. ವಾಸ್ತವಿಕವಾಗಿ ಅವರು ವಾರ್ತಾಪತ್ರಗಳ ರಾಜ್ಯದಲ್ಲಿ ವಿಹರಿಸುತ್ತಿದ್ದಾರೆ ಅಷ್ಟೆ. ಅವರು ದೆಹಲಿ ಬಿಟ್ಟು ಹೊರಗೆ ಬಂದಾಗಲೇ ತಿಳಿಯುತ್ತದೆ, ಜಗತ್ತು ಎಷ್ಟು ವಿಶಾಲವಾಗಿದೆ ಎಂದು.

'ಇಪ್ಟಾ', 'ಸಮುದಾಯ' ದಂತಹ ಸಾಂಸ್ಕೃತಿಕ ಸಂಘಟನೆಗಳು ವೈಯ್ಯಕ್ತಿಕ ಲಾಭಕ್ಕಾಗಿ ಕೆಲಸ ಮಾಡುತ್ತಿಲ್ಲ. ಸಾಮಾಜಿಕ ಏಳಿಗೆಗಾಗಿ, ಜನರ ಕಲ್ಯಾಣಕ್ಕಾಗಿ ಪ್ರತಿಫಲಾಪೇಕ್ಷೆ ಇಲ್ಲದೆ ಶ್ರಮಿಸುತ್ತಿರುವುದು ಶ್ಲಾಘನೀಯವಾಗಿದೆ.

ವಯೋವೃದ್ಧರು ತಪ್ಪಾಗಿ ತಿಳಿದು ಕೊಳ್ಳುವುದುಂಟು, ತಾವು ಯುವಕರಾಗಿದ್ದಾಗ ಪ್ರಪಂಚ ಜೀವಂತವಾಗಿತ್ತು. ಈಗ ನಿದ್ರಿಸುತ್ತದೆ ಎಂದು ನಿಜವಾಗಿ ವಸ್ತು 'ಸ್ಥಿತಿ ಹಾಗಿಲ್ಲ ಇಂದಿನ ಯುವಜನರೂ ಸಮಾಜ ಬದಲಾವಣೆಗಾಗಿ ಹಾತೊರೆಯುತ್ತಿದ್ದಾರೆ. ಅವರಿಗೆ ಧೃತಿಗೆಡಲು ನಿರಾಶರಾಗಲು ಬಿಡುವಿಲ್ಲ. ಅವರು ಪೂರ್ಣ ಸ್ಫೂರ್ತಿಯಿಂದ ಮುನ್ನುಗ್ಗುತ್ತಿದ್ದಾರೆ. ಈ ದಿಸೆಯಲ್ಲಿ 'ಇಪ್ಟಾ' 'ಸಮುದಾಯ' ಒಳ್ಳೆಯ ಕೆಲಸಗಳನ್ನು ಕೈಗೊಂಡಿವೆ.

ಬೀದಿ ನಾಟಕ ಬಹಳ ಕಷ್ಟಸಾಹಸಕರ. ಪ್ರೊಸೇನಿಯಂ ನಾಟಕ ಸುಲಭ ಬೀದಿ ನಾಟಕಗಳನ್ನು ಆಡುವಾಗ ಅಪರಿಚಿತ ವಿರೋಧಿ ಪ್ರೇಕ್ಷಕರನ್ನು ಎದುರಿಸಬೇಕಾಗುವುದು ಜೊತೆಗೇ ಸಹಾನುಭೂತಿ ಪರ ಪ್ರೇಕ್ಷಕರೂ ಇರುತ್ತಾರೆ. ಬೀದಿ ನಾಟಕ ನಿಜಜೀವನದ ನೈಜ ಚಿತ್ರಣ ನೀಡುತ್ತದೆ. ಬೀದಿ ನಾಟಕದ ಕಲಾವಿದರೂ ಇತರ ನಾಟಕಗಳನ್ನು ಆಡಿ ಸುಲಭವಾಗಿ ಹೇರಳ ಹಣಗಳಿಸಬಹುದು. ಆದರೆ, ಅವರ ಉದ್ದೇಶ ಹಣಗಳಿಕೆಯಲ್ಲ,

ಅವರು ಸಾಮಾಜಿಕ ಪ್ರಗತಿಗೆ, ಬದಲಾವಣೆಗೆ ಶ್ರಮಿಸಲು ಬದ್ಧರಾಗಿರುವವರು.

ಸಫ್ದರ್ ಹಶ್ಮಿ ಕೊಲೆ ಮುಂಬರುವ ಅಪಾಯಕಾರಿ ದಿನಗಳ ಕುರಿತು ಮುನ್ನೆಚ್ಚರಿಕೆ : ಸಫ್ದರ್ ಹಶ್ಮಿ ಅಂತಹವರಲ್ಲಿ ಒಬ್ಬರು. ಅವರ ಅಗಲಿಕೆಯಿಂದ ಅತ್ಯಮೂಲ್ಯವಾದ ಜೀವರತ್ನ ಒಂದನ್ನು ನಾವು ಕಳೆದು ಕೊಂಡಂತಾಗಿದೆ. ಹದಿನೈದು ವರ್ಷ ಎಳೆಯವನಾಗಿದ್ದಾಗಲೇ ನನಗೆ ಪರಿಚಯ, ಪ್ರಾರಂಭದಲ್ಲಿ ಅವರ ಶಿಕ್ಷಕನಾಗಿ ಅವರಿಗೆ ಭವ್ಯ ಭವಿಷ್ಯವಿತ್ತು. ಅವರದ್ದು ಅರಳುವ ಪ್ರತಿಭೆ, ರಚನಾತ್ಮಕ ರೀತಿ ಬೀದಿ ನಾಟಕ ಟಿ.ವಿ. ಫ್ರೈಸೇನಿಯಂ ನಾಟಕಗಳಲ್ಲಿ ಅವರದು ಎತ್ತಿದ ಕೈ ಅದ್ಭುತ ಸಾಧನೆ.

ಹಶ್ಮಿ ಪೂರ್ಣ ಪ್ರಮಾಣದಲ್ಲಿ ಅರಳುತ್ತಿರುವಾಗಲೇ ಅಮಾನುಷವಾಗಿ ಕೊಲ್ಲಲ್ಪಟ್ಟರು ! ಸಾರಸ್ವತಲೋಕ ದಂಗಾಯಿತು. ಹತ್ತುಸಾವಿರ ಅಭಿಮಾನಿಗಳು, ಕಲಾವಿದರು, ಬರಹಗಾರರು, ಕಾರ್ಮಿಕರು ... ... ಅವರ ಅಂತ್ಯ ಸಂಸ್ಕಾರದ ಮೆರವಣಿಗೆಯಲ್ಲಿ ಹದಿನಾಲ್ಕು ಕಿ.ಮಿ. ದೂರ ಮೌನವಾಗಿ ನಡೆದು ಬಂದರು. ಅವರಲ್ಲಿ ವಿಷ್ಣು ಪ್ರಭಾಕರ ೭೭ ವರ್ಷದ ವಯೋ ವೃದ್ಧ ಹಿಂದಿ ಸಾಹಿತಿ ಕೂಡ ಈ ಅಂತಿಮ ಯಾತ್ರೆಯಲ್ಲಿ ಕಾಲ್ನಡಿಗೆಯಲ್ಲಿ ಭಾಗವಹಿಸಿದ್ದರು! ಇವರು ಯಾವ ಪಕ್ಷಕ್ಕೂ ಸೇರಿದವರಲ್ಲ ಹಾಗೆ ನೋಡಿದರೆ. ಬಹುಪಾಲು ಅಭಿಮಾನಿಗಳು ಸಿ.ಪಿ.ಐ. ಅಥವ ಸಿ.ಪಿ.ಐ (ಎಂ) ಪಕ್ಷಕ್ಕೆ ದೂರದಿಂದಲೂ ಸಂಬಂಧಿಸದವರಲ್ಲ.

ನಮ್ಮ ದೇಶದಲ್ಲಿ ಪ್ರತಿದಿನವೂ ಹಲವಾರು ಕಡೆಗಳಲ್ಲಿ ಕೊಲೆಗಳು ನಡೆಯುತ್ತಲೆ ಇವೆ. ಒಬ್ಬ ಕಲಾವಿದ ಕೊಲೆಯಾಗುವುದು ಪ್ರಸಕ್ತ ಪರಿಸ್ಥಿತಿಯಲ್ಲಿ ವಿಶೇಷವೇನಲ್ಲ ಆದರೆ, ಹಶ್ಮಿಯವರ ಹತ್ಯೆ ಒಬ್ಬ ವ್ಯಕ್ತಿಯ ಕೊಲೆಯಲ್ಲ ಈ ದುರಂತ ಘಟನೆ ನಮಗೆ ಮುಂಬರುವ ಅಪಾಯಕಾರಿ ದಿನಗಳ ಕುರಿತು ಮುನ್ನೆಚ್ಚರಿಕೆ ನೀಡುತ್ತದೆ!.

ಹಶ್ಮಿಯವರ ಪತ್ನಿ ಮಾಲಾ ಅವರ ಅಪೂರ್ವ ಆತ್ಮಸ್ಥೈರ್ಯ ಗಮನಾರ್ಹವಾದುದು. ಅಂತಿಮ ಸಂಸ್ಕಾರ ಮುಗಿಯುತ್ತಲೇ. ಹಿಂದಿನ ಸ್ಥಳದಲ್ಲೇ ಅದೇ ಸಮಯದಲ್ಲಿ ಅದೇ ನಾಟಕ ಮರುಪ್ರದರ್ಶನದ ಮೂಲಕ ತನ್ನ ಪೂರ್ಣ ಸಮರ್ಪಣಾ ಭಾವನೆಯನ್ನು ಪ್ರಕಟಿಸಿದರು. ದಿ. ೯ ರಂದು ಸ್ಮಾರಕ ದಿನಾಚರಣೆಯಂದು ಮಾಲಾ ಅವರು ಮಾತನಾಡುತ್ತಾ ಹಶ್ಮಿಯವರ ಅಪೂರ್ಣ ಕೆಲಸವನ್ನು ತಾನು ಮುಂದುವರೆಸಲು ಪ್ರತಿಜ್ಞೆ ಮಾಡಿದರು. ಈ ವಿಧ್ಯಮಾನಗಳು ನಮಗೆ ಪುನಃ ಸ್ಫೂರ್ತಿ ನೀಡುತ್ತವೆ. ಭವಿಷ್ಯತ್ತಿನಲ್ಲಿ ಭರವಸೆ ಮೂಡಿಸುತ್ತವೆ.

ಪ್ರಜಾಪ್ರಭುತ್ವ ಜಾತ್ಯಾತೀತ ಶಕ್ತಿಗಳನ್ನು ಬಲಪಡಿಸಬೇಕು : ಹಶ್ಮಿಯವರ ಕೊಲೆಯ ಪ್ರಕರಣಕ್ಕೆ ಸಂಬಂಧಿಸಿದ ಪೋಲೀಸರ ತನಿಖೆ ದೀರ್ಘಕಾಲ ಉಳಿಯುತ್ತದೆ. ಅಷ್ಟರಲ್ಲಿ ಈ ದುರ್ಘಟನೆ ಜನರ ನೆನಪಿನಿಂದ ದೂರವಾಗುತ್ತದೆ. ಹಶ್ಮಿಯವರ ನೆನಪು ನಿರಂತರ ಉಳಿಯಬೇಕಾದರೆ. ಅವರ ಕೆಲಸ ಮುಂದುವರಿಯಬೇಕು. ಕೇವಲ ಬೀದಿ ನಾಟಕ ಪ್ರದರ್ಶನವಲ್ಲ. ಸಾಮಾಜಿಕ ಬದಲಾವಣೆಯಲ್ಲಿ ಸಾಂಸ್ಕೃತಿಕ ಹೋರಾಟ ಮುಂದುವರಿಯಬೇಕು. ಆದರೆ, ಸಾಂಸ್ಕೃತಿಕ ಸಂಘಟನೆಗಳಲ್ಲಿ ಹಲವಾರು ನ್ಯೂನತೆಗಳಿವೆ, ದೌರ್ಬಲ್ಯಗಳಿವೆ. ಅವುಗಳನ್ನು ಹೋಗಲಾಡಿಸಿಕೊಳ್ಳಬೇಕು.

ನಮ್ಮ ಸುತ್ತಲೂ ನಡೆಯುತ್ತಿರುವ ಪ್ರತಿಕ್ರಿಯೆ ನಮ್ಮನ್ನು ಎಚ್ಚರಿಸುತ್ತದೆ. ನಾವು ಮನೆಯಲ್ಲಿ ಕುಳಿತು ಕೊಳ್ಳುವುದಲ್ಲ ಕಾರ್ಯಪ್ರವೃತ್ತರಾಗಬೇಕು. ಪ್ರಜಾಪ್ರಭುತ್ವ ಜಾತ್ಯಾತೀತ ಶಕ್ತಿಗಳನ್ನು ಬಲಗೊಳಿಸಲು ಪ್ರತಿ ಒಬ್ಬನೂ ಏನಾದರೂ ಕಾಣಿಕೆಕೊಡಬೇಕು. ನನಗಿಂತಲೂ ನಿಜಜೀವನಕ್ಕೆ ನೀವು ಹೆಚ್ಚು ಸಮೀಪವಾಗಿದ್ದೀರಿ, ಸ್ಪಂದಿಸುತ್ತಿದ್ದೀರಿ. ನಾನೂ ನನ್ನಿಂದಾದಷ್ಟು ಈ ಆಂದೋಳನದಲ್ಲಿ ಪಾಲುಗೊಳ್ಳುತ್ತೇನೆ. ಒಟ್ಟಿಗೇ ನಾವು ಬಲಿಷ್ಠರಾಗೋಣ. ನಾವು ಒಡೆದು ಹರಿದು ಹಂಚಿಹೋದಂತೆಲ್ಲ ದುರ್ಬಲರಾಗುತ್ತೇವೆ.

ಕಪ್ಪು ಹಣದ ಪ್ರಭಾವ, ಪ್ರಜಾಪ್ರಭುತ್ವ ಬುಡಮೇಲಾಗುತ್ತದೆ : ತುರ್ತುಪರಿಸ್ಥಿತಿಯಲ್ಲಿ (೧೯೭೫–೭೭) ಎಲ್ಲಾ ದುಷ್ಟ ಶಕ್ತಿಗಳು ಒಗ್ಗೂಡಿವೆವು. ಈಗಲೂ ಕೆಲವು ಅಪಾಯಕಾರಿ ಬೆಳವಣಿಗೆಗಳು ನಮ್ಮನ್ನು ಸರ್ವನಾಶದತ್ತ ಒಯ್ಯುತ್ತಿವೆ.

ಒಂದನೇಯದು ಕಪ್ಪುಹಣದ ಚಲಾವಣೆ ಮತ್ತು ಪ್ರಭಾವ ಇದೊಂದು ಅನಿವಾರ್ಯ ಪಿಡುಗು ಎಂದು ಸ್ವೀಕರಿಸಲಾಗಿದೆ. ಇದು ದೇಶದ ಕಾನೂನು ಮತ್ತು ಶಿಸ್ತನ್ನು ಬುಡಮೇಲು ಮಾಡುತ್ತದೆ.

ಎರಡನೇಯದಾಗಿ ಯಾವುದಕ್ಕೂ ಹೇಸದ ಶಕ್ತಿಗಳು ಮತ್ತು ಗುಂಡಾಗಳು, ಗುಂಡಾಗಳು ಮತ್ತು ಪೋಲೀಸರು ಹೆಚ್ಚು ಹೆಚ್ಚು ಶಾಮೀಲಾಗುತ್ತಿವೆ. ಇದರಿಂದ ಪ್ರಜಾಪ್ರಭುತ್ವವೇ ಬುಡಮೇಲಾಗಲಿದೆ. ಪ್ರಜಾಪ್ರಭುತ್ವ ಸಂವಿಧಾನದ ಕಾಗದದ ಮೇಲೆ ಮಾತ್ರ ಇದೆ. ಪ್ರತ್ಯಕ್ಷದಲ್ಲಿ ಯಾರಾದರೂ ಪೋಲಿಸರ ಸಹಾಯ ಕೇಳಲು ಹೋದರೆ. ಅವರ ನಿಜಗುಣ ಬಯಲಾಗುವುದು !

ಮೂರನೇಯದು, ನಮ್ಮ ಪ್ರಜಾಪ್ರಭುತ್ವದ ಸಂಸ್ಥೆಗಳು, ಹಕ್ಕುಗಳು, ಸಾಮಾನ್ಯ ಜೀವನ ಬುಡಮೇಲಾಗುತ್ತಿವೆ. ನಾಶವಾಗುತ್ತಿವೆ.

ಸಾಂಸ್ಕೃತಿಕ ಕಾರ್ಯಕರ್ತರು ನಿಜಜೀವನವನ್ನು ಎದುರಿಸಬೇಕಾದವರು. ಪ್ರಜಾಪ್ರಭುತ್ವದ ಜಾತ್ಯಾತೀತ ಮೌಲ್ಯಗಳಿಗೆ ಹೋರಾಡ ಬೇಕಾದವರು. ಸುತ್ತ ಮುತ್ತ ಏನು ನಡೆಯುತ್ತದೆ ಎಂದು ಅವರು ಜನರಿಗೆ ತಿಳಿಯಪಡಿಸಬೇಕು. ಪ್ರಾಂತೀಯತೆ. ಧರ್ಮಾಂಧತೆ, ಮೂಲಭೂತವಾದ, ಪ್ರತ್ಯೇಕತೆ, ಇತ್ತೀಚಿಗಿನ ವಿಧ್ಯಮಾನಗಳು ಇವುಗಳ ಅಪಾಯದ ಕುರಿತು ಜನಜಾಗೃತಿಗೊಳ್ಳಬೇಕು.

ಶಾಂತಿ, ಸಹಬಾಳ್ವೆ ನಮ್ಮ ಜನರ ಸಂಸ್ಕೃತಿ : ನಮ್ಮ ದೇಶದಲ್ಲಿ ಆರು ಏಳು ನೂರು ವರ್ಷಗಳಿಂದಲೂ ಜನರು ಜಾತಿ, ಮತ, ಭಾಷೆ ಭೇದಗಳಿಲ್ಲದೆ ಅನ್ಯೋನ್ಯತೆಯಿಂದ ಇದ್ದರು. ಅದು ಭಾರತೀಯ ಜೀವನ ಕ್ರಮವಾಗಿತ್ತು. ಪರಸ್ಪರ ಹೊಂದಿಕೊಂಡು ತಾಳ್ಮೆಯಿಂದ ಜೀವಿಸುವದು ನಮ್ಮ ಸಂಸ್ಕೃತಿಯಾಗಿತ್ತು. ನಮ್ಮ ಜನರು ಶಾಂತಿಪ್ರಿಯರು, ಆಕ್ರಮಣ ಪ್ರವೃತ್ತಿಯವರಲ್ಲ. ಪರಸ್ಪರ ತಿಳಿದುಕೊಂಡು, ಕೊಡುಕೊಳ್ಳುವ ವಿಧಾನದ ಮೂಲಕ ಅವರು ಬದುಕಲು ತಿಳಿದಿರುವವರು. ನಮ್ಮ

ಜನರು ಪರಸ್ಪರ ಕೊಲ್ಲಲ್ಪಡುವುದನ್ನು ನಾವು ಊಹಿಸಲು ಸಾಧ್ಯವೇ ? ಈಗ ನಡೆಯುತ್ತಿರುವುದು ಅದೇ ! ಭಿನ್ನಾಭಿಪ್ರಾಯಗಳು ವೈರುಧ್ಯಗಳು ಇದ್ದರೆ, ಶಾಂತಿಯುತವಾಗಿ ಪ್ರಜಾಪ್ರಭುತ್ವ ಮಾರ್ಗದಲ್ಲಿ ಅವುಗಳನ್ನು ಪರಿಹರಿಸುವುದು ಸಾಧ್ಯವಿದೆ.

ಸಫ್ದರ್ ಹಶ್ಮಿಯವರ ಕೊಲೆ ಅಮಾನುಷ. ಸಭೆಗಳನ್ನು ನಾಟಕಗಳನ್ನು ಗಲಭೆ ಎಬ್ಬಿಸಿ ಚದುರಿಸಿದ್ದು ನಾವು ಕೇಳಿದ್ದೇವೆ. ಆದರೆ, ಯಾರಾದರೂ ಪಿಸ್ತೂಲ್, ಲಾಠಿ ತಂದು ನಾಟಕ ಸಭೆ ನಡೆಯುವುದನ್ನು ನಿಲ್ಲಿಸಲು ಸಾಧ್ಯವೇ ? ಇದು ಅಪಾಯಕಾರಿ. ಇದು ಹೇಗಾಯಿತು. ? ಪೋಲೀಸರು, ರಾಜಕಾರಣಿಗಳು ಏನೂ ಮಾಡಲಾರರು, ಅವರು ತಮ್ಮ ಕಡೆಗೆ ಇದ್ದಾರೆ ಎಂದು ಗುಂಡಾಗಳಿಗೆ ಯಾವುದಕ್ಕೂ ಹೇಸದ ಜನರಿಗೆ ಧೈರ್ಯ !.

ಪ್ರೊ. ಶೇಷಾದ್ರಿಯವರ ಕೊಲೆಯನ್ನು ಪ್ರತಿಭಟಿಸಬೇಕು : ನಾನು ನಿಮ್ಮಲ್ಲಿ ತುಡಿಯುತ್ತಿರುವ (ಉಕ್ಕುತ್ತಿರುವ) ಜೀವನೋತ್ಸಾಹವನ್ನು ಅನುಭವಿಸಲು ನಿಮ್ಮ ಮಧ್ಯೆ ಬಂದೆ. ನಿಮ್ಮಿಂದ ಸ್ಫೂರ್ತಿ ಪಡೆದೆ. ಸಾಂಸ್ಕೃತಿಕ ಕಾರ್ಯಕರ್ತರು ಅವರ ಪಾತ್ರಗಳನ್ನು ಕರ್ತವ್ಯಗಳನ್ನು ನಿರ್ವಹಿಸಬೇಕು. ನಮ್ಮ ಜನ ಆರ್ಥಿಕವಾಗಿ ಹಿಂದುಳಿದಿರಬಹುದು. ಆದರೆ ನೈತಿಕವಾಗಿ ಅವರು ಶ್ರೀಮಂತರು, ಮಹಾನ್ ಜನರು. ನಮ್ಮ ಜನಕ್ಕೆ ವಿವೇಚನೆ ಇದೆ, ಶತಮಾನಗಳ ನಿಸ್ವಾರ್ಥ ಹೋರಾಟಗಳ ಅನುಭವ ಇದೆ. ಮುಂಬರುವ ಅಪಾಯಗಳ ಕುರಿತು ಅವರನ್ನು ಜಾಗೃತಗೊಳಿಸಬೇಕು. ಅವುಗಳ ವಿರುದ್ಧ ಹೋರಾಟಕ್ಕೆ ಅಣಿಗೊಳಿಸಬೇಕು. ಸ್ಥಳೀಯವಾಗಿ ಪ್ರೊ. ಶೇಷಾದ್ರಿಯಂತಹವರ ಕ್ರೂರ ಹತ್ಯೆಯನ್ನು ಪ್ರತಿಭಟಿಸಬೇಕು.

**○ ಭೀಷ್ಮಸಹಾನಿ**

ಡೊಂಕು ಬಾಲದ ನಾಯಿ ನಿಯತ್ತು ಡೊಂಕೇ ?
ಡೊಂಕು ಬಾಳೆಯ ಹಣ್ಣಿನ ರುಚಿ ಡೊಂಕೇ ?
ಡೊಂಕು ಕಬ್ಬಿನ ಸಿಹಿರುಚಿ ಡೊಂಕೇ ? ದತ್ತಣ್ಣ

ಸಂತೆಯೊಳು ಚಿಂತೆ ಬೇಡ, ಚಿಂತೆಗೆ
ಗಡ್ಡ ಬಿಡ ಬೇಡ, ಚಿಂತಿಸಿ ನಿದ್ರಿಸಬೇಡ
ಚಿಂತೆ ಇರುವಾಗ ಹೊಸಕಾರ್ಯ ಬೇಡ ದತ್ತಣ್ಣ

**ದತ್ತಣ್ಣ**

# ಬಂಡಾಯ ಕಾವ್ಯ ಕುರಿತು

ಕಾವ್ಯಕ್ಕೆ ಕರುಳಿರಬೇಕು. ಈ ಕರುಳಿಗೆ ಕಣ್ಣಿರಬೇಕು, ಹಾಗೆ ನೋಡಿದರೆ ಯಾವುದೇ ಸೃಜನಶೀಲ ಕ್ರಿಯೆಗೆ ಕರುಳೊಡೆದ ಮಾನಸಿಕ ನೆಲೆ ಮುಖ್ಯ. ಇಲ್ಲದಿದ್ದರೆ ಬೌದ್ಧಿಕ ಅರಿವಿನಲ್ಲಿ ಅನುಭವಸ್ತರಗಳು ಕ್ಷೀಣವಾಗಬಹುದು. ಅಂತೆಯೇ ಅತಿಭಾವುಕತೆಯಲ್ಲಿ ಅರಿವು ಹಲ್ಲೆಗೆ ಒಳಗಾಗಬಹುದು. ಈ ಎರಡೂ ಅಪಾಯಗಳಿಂದ ಪಾರಾಗುವ ಪ್ರಕ್ರಿಯೆಯಲ್ಲೇ ಇವತ್ತಿನ ಬಂಡಾಯಕಾವ್ಯದ ಭವಿಷ್ಯ ಅಡಗಿದೆ. ಬೌದ್ಧಿಕಲೋಲುಪತೆ ಮತ್ತು ಅತಿಭಾವುಕತೆಗಳಿಂದ ಹೊರತಾದ ತಾಜಾ ಅನುಭವ ಮತ್ತು ಸಾಮಾಜಿಕ ಅರಿವಿನ ಬಸಿರು ತುಂಬಿ ಹುಟ್ಟು ಕಾವ್ಯ. ತನ್ನ ತೀವ್ರತೆಯಲ್ಲಿ ಕರುಳಿನ ತಲಸ್ಪರ್ಶವನ್ನೂ, ನೋಟದಲ್ಲಿ ಕಣ್ಣಿನ ಒಳಸ್ಪರ್ಶವನ್ನೂ ತುಂಬಿಕೊಂಡು ಮಾನವೀಯವೂ ಮನನೀಯವೂ ಆಗಬಲ್ಲದು.

ಬಂಡಾಯಕಾವ್ಯ ಎದುರಿಸಬೇಕಾಗಿರುವ ಇನ್ನೊಂದು ಬಿಕ್ಕಟ್ಟೂ ನಮ್ಮೆದುರಿಗಿದೆ. ಬಂಡಾಯಕವಿಯ ಕನಸಿನ, ಆದರ್ಶದ ಸಮಾಜ ಬೇರೆಯೇ ಇದೆ. ಆದರೆ ನಾವು ಬದುಕುತ್ತಿರುವ ಸಮಾಜದ ನೆಲೆ ಕಣ್ಣೆದುರಿಗೇ ಇದೆ. ಸದಾಕಾಲಿಗೆ ತೊಡರುತ್ತಲೆ ಇದೆ. ಇಲ್ಲಿನಿಂತು ಅಲ್ಲಿನದನ್ನು ಹಾರೈಸುವಾಗ ಅಪಾಯವೊಂದಿದೆ ಕವಿಯೊಬ್ಬ–ಇಂಥ ಸಂದರ್ಭದಲ್ಲಿ–ಆದರ್ಶದ ಆರ್ಭಟದಲ್ಲಿ ಅತಿ ಆಶಾವಾದಿಯಾಗಿ ವಾಸ್ತವವನ್ನು ಪೊಕ್ಕು ಒದ್ದಾಡದೆ ಹೋಗಬಹುದು–ಇದರಿಂದ ಆತ ವಾಸ್ತವವನ್ನು ಕಾವ್ಯವಾಗಿಸದೆ ವಂಚನೆಗೊಳಗಾಗುವುದರ ಜೊತೆಗೆ ಆದರ್ಶದ ನುಡಿಸೇವೆಯಲ್ಲಿ ಕಾವ್ಯಕ್ಕೂ ಅನ್ಯಾಯ ಮಾಡುವ ಸಂದರ್ಭ ಒದಗಬಹುದು. ಆದ್ದರಿಂದಲೇ ಒಳಸಂಘರ್ಷವಿಲ್ಲದೆ ಹುಟ್ಟುವ ಕಾವ್ಯ ನಿಜವಾದ ಬಂಡಾಯ ನೆಲೆಯನ್ನು ಪಡೆಯದೆ ಇರಲಿಕ್ಕೆ ಸಾಧ್ಯ. ಆದರ್ಶವನ್ನು ಆಶಯದ ಮಟ್ಟಕ್ಕೆ ನಿಯಂತ್ರಿಸುವ ನೋಟವಿದ್ದರೆ ನಿಂತನೆಲವೂ ಕಂಡೀತು. ಈ ಆಶಯಕ್ಕೆ ಅಡ್ಡಗಾಲುಹಾಕುವ ವಾಸ್ತವದ ಅನುಭವವೂ ದಕ್ಕೀತು ಆಗ ಆಶಯ ಮತ್ತು ವಾಸ್ತವಗಳ ಒಳ ಸಂಘರ್ಷದ ಯಾತನೆಯಲ್ಲಿ ಅನುಭವ ಸಾಮರಸ್ಯವೊಂದು ಭ್ರೂಣ ರೂಪತಾಳಿ, ಕಾಲಾನುಕ್ರಮದಲ್ಲಿ ಕೂಸಾಗಿ ಹುಟ್ಟುತ್ತದೆ. ಹುಟ್ಟಿದ ಕೂಸು ಕರುಳ ಬಳ್ಳಿಯನ್ನು ಕತ್ತರಿಸಿಕೊಂಡರೂ ಕರುಳಿನ ಕೂಸೇ ಆಗಿರುತ್ತದೆ. ಇದೇ ಕಾವ್ಯದ ಬಂಡಾಯಕಾವ್ಯದ ರೂಪಧಾರಣೆಯ ಸೃಜನಶೀಲ ಪ್ರತಿಕ್ರಿಯೆ ಇದನ್ನು ಮನಗಾಣದಿದ್ದರೆ ಬಂಡಾಯಕವಿಯೊಬ್ಬ ಪೊಳ್ಳು ಪ್ರತಿಷ್ಠೆಯ ಪುಢಾರಿತನಕ್ಕೆ ಮಾರು–ಹೋಗುವ ಕೆಲಸ, ಮೌನವಾಗಿಯೇ ನಡೆದು ಬಿಡಬಹುದು. ಹಾಗೆ ನೋಡಿದ ಯಾವುದೇ ಕವಿಗೆ ಪ್ರತಿಷ್ಠೆ ಮತ್ತು ಅಹಂಕಾರಗಳು ಸಲ್ಲದ ಸಾಧನಗಳು. ಇವು ಕವಿಯ ಠೇಂಕಾರವನ್ನು ಪ್ರತಿನಿಧಿಸುತ್ತ ಒಳಗಿನ ಮನುಷ್ಯನನ್ನು ಕೊಲ್ಲುತ್ತ ಹೋಗುವ ಅಸ್ತ್ರಗಳಾಗುತ್ತವೆ. ಕವಿಗೆ ಬೇಕಾದ್ದು ಅಹಂಕಾರವಿಲ್ಲದ ಆಪ್ತತೆ ಮತ್ತು ಪ್ರತಿಷ್ಠೆಯಿಲ್ಲದ ಪ್ರೀತಿ. ಇಂಥ

ಮಾನಸಿಕ ಸ್ಥಿತಿಯಿಂದ ಮಾತ್ರ ಬದುಕನ್ನು ಆತ್ಮೀಯವಾಗಿ ಒಳಗೊಳ್ಳುತ್ತ ಅದರ ಅರೆಕೊರೆಗಳನ್ನು ಕಾಣುತ್ತ ನಿರ್ದಿಷ್ಟ ನೋಟ. ನಿಲುವುಗಳನ್ನು ರೂಪಿಸಿ ಕೊಳ್ಳಲು ಸಾಧ್ಯ. ಆದಕ್ಕಾಗಿಯೇ ನಾನು ಹೇಳಿದ್ದು–ಕಾವ್ಯಕ್ಕೆ ಕರುಳಿರಬೇಕು ಎಂದು. ಕರುಳಿಲ್ಲದ ಕಾವ್ಯ ಕ್ರೂರವಾಗುತ್ತದೆ. ತನ್ನ ಆಶಯದಲ್ಲಿ ಕ್ರೂರವಾಗಬಹುದು. ಕೊಡುವ ಕಾವ್ಯಾನುಭವದಲ್ಲೂ ಸಹೃದಯರಪಾಲಿಗೆ ಕ್ರೂರವಾಗಬಹುದು.

– ಬರಗೂರು ರಾಮಚಂದ್ರಪ್ಪ

## ಅರಿವು ಕಣ್ಣು ತೆರೆದಾಗ

ಎ. ಎನ್. ಮೂರ್ತಿರಾಯರು ತಮ್ಮ ಆತ್ಮಕಥೆ "ಸಂಜೆಗಣ್ಣಿನ ಹಿನ್ನೋಟ" ದಲ್ಲಿ ಸಾರ್ವಕಾಲಿಕ ಸತ್ಯವೆನಿಸುವ ಸ್ವಾನುಭಾವದ ನುಡಿಯೊಂದನ್ನು ಹೇಳಿದ್ದಾರೆ. "ವೇದವೇ ಎಲ್ಲ ಜ್ಞಾನ" ಎಂಬುದಕ್ಕೆ ಬದಲಾಗಿ 'ಎಲ್ಲ ಜ್ಞಾನವೂ ವೇದ' ಎಂಬುದು ಸತ್ಯಕ್ಕೆ ಹತ್ತಿರವಾದ ಮಾತು ಎಂದು. "ಜ್ಞಾನವೆಂದರೆ ಮಾನವನ ಜೀವಿತಕ್ಕೆ ಶಾಂತಿ-ನೆಮ್ಮದಿ ನೀಡುವ ಬೆಳಕು". ಈ ಬೆಳಕು ಕೇವಲ ವೇದ-ಪುರಾಣ ಪ್ರಾಚೀನ ಗ್ರಂಥಗಳಿಂದ ಮಾತ್ರವಲ್ಲದೆ, ಬದುಕನ್ನು ಹಸನಾಗಿಸುವ ಪ್ರತಿಯೊಂದು ಕೃತಿಯೂ ಜ್ಞಾನ ಎಂಬುದು ರಾಯರ ಮಾತಿನ ವಿಸ್ತೃತ ವಿವರಣೆ. ಈ ದೃಷ್ಟಿಯಿಂದ ನನ್ನ ಮುಂದೆ ಇರುವ "ಮನಸ್ಸು ಇಲ್ಲದ ಮಾರ್ಗ" ಕೃತಿಯನ್ನು 'ವೇದದ ತುಣುಕು' ಎನ್ನುತ್ತೇನೆ. ಯಾಕೆಂದರೆ ಈ ಕೃತಿಯಲ್ಲಿ ಮಾನವನಲ್ಲಿರುವ ಎಲ್ಲಾ ತರದ ದುಃಖ, ದುಗುಡ, ದುಮ್ಮಾನದ ಕ್ರಿಯೆಯನ್ನು, ಈ ಕ್ರಿಯೆಯಿಂದ ಉಂಟಾಗುವ ದೈಹಿಕ ತೊಂದರೆಗಳನ್ನು ನಿವಾರಿಸುವ ದಾರಿಗೆ ಕೈದೀವಿಗೆಯಾಗಿದೆ. ಡಾ॥ ಎಂ. ಸುಬ್ರಮಣ್ಯಂ ರವರು ಮಾನಸಿಕ ಸಮಸ್ಯೆಗಳಿಗೆ ಗೆಸ್ಟಾಲ್ಟ್ ಥೆರಪಿ ಮತ್ತು ಟ್ರಾನ್ಸ್ಯಾಕ್ಷನಲ್ ಅನಾಲಿಸಿಸ್(ಟಿ.ಎ) ಆಧಾರದಿಂದ ಚಿಕಿತ್ಸೆ ಮಾಡಿ ಯಶಸ್ವಿಯಾದ ಕಥೆ ಇಲ್ಲಿದೆ. ಗೆಸ್ಟಾಲ್ಟ್ ಥೆರಪಿ ಮತ್ತು ಟಿ ಎ ಯನ್ನು ಓದುಗರಿಗೆ ಪರಿಚಯಿಸುತ್ತಿರುವ ಮೊತ್ತ ಮೊದಲ ಕನ್ನಡ ಪುಸ್ತಕವಿದು.

ತಲೆ ಸರಿಯಿಲ್ಲದವರಿಗೆ ಮಾತ್ರ ಸೈಕಾಲಜಿ ಎನ್ನುವುದು ಸಾಮಾನ್ಯವಾದ ಅಭಿಪ್ರಾಯ. ಆದರೆ ತಲೆ ಸರಿ ಇರುವವರೂ ಕೂಡ ಸೈಕಾಲಜಿ ತಿಳಿದರೆ ಸರಿಯಾದ ಜೀವನ ಶೈಲಿಯನ್ನು ಇನ್ನಷ್ಟು ಸರಿಯಾಗಿ ಜೀವಿಸಲು ಸಾಧ್ಯ. ವೈದ್ಯಕೀಯವಾಗಿ ದೇಹದ ಎಲ್ಲಾ ಭಾಗಗಳೂ ಸರಿ ಇದ್ದರೂ "ಯಾಕೋ ಬೇಜಾರು" "ಆತ್ಮಹತ್ಯೆ ಮಾಡಿಕೊಳ್ಳೋಣ ಅನ್ನಿಸುತ್ತೆ", "ನಾನು ನಿಷ್ಪ್ರಯೋಜಕ", "ಹೇಡಿ–ಪಾಪಿ" ಮುಂತಾಗಿ ಕೊರಗುತ್ತಾ, ಜೀವನ ಪರ್ಯಂತ ವ್ಯಥೆ ಪಡುವವರೇ ತಮ್ಮ ಆ ಜನ್ಮ

ಸಿದ್ಧ ಹಕ್ಕು ಎಂದು ಕಲ್ಪಿಸಿಕೊಳ್ಳುವ ಮನೋದೌರ್ಬಲ್ಯ ಇರುವವರು ಖಂಡಿತಾ ಈ ಪುಸ್ತಕ ಓದಬೇಕು. ಅದಕ್ಕಾಗಿ ಈ ಪುಸ್ತಕದ ಸ್ಥೂಲ ಪರಿಚಯ ಈ ಲೇಖನದ ಉದ್ದೇಶ.

ಒಬ್ಬ ವ್ಯಕ್ತಿ ಪರಿಸರಕ್ಕೆ ಹಾಗೂ ತನಗೆ ಸಂಬಂಧಿಸಿದ ವಿಷಯಗಳಲ್ಲಿ, ಭಾವನೆ ಹಾಗೂ ಆಲೋಚನೆಗಳಲ್ಲಿ ಹೊಂದಾಣಿಕೆ ಇಲ್ಲದೆ ವರ್ತಿಸುವವರನ್ನು ಮಾನಸಿಕ ರೋಗಿ ಎನ್ನುತ್ತೇವೆ. ಅಸ್ತವ್ಯಸ್ತವಾಗಿರುವ ಮನಸ್ಸಿನ ಕ್ರಿಯೆಯನ್ನು, ಅದರಿಂದ ಉಂಟಾಗುವ ದೈಹಿಕ ತೊಂದರೆಯನ್ನು ನಿವಾರಿಸಲು ಸೈಕೋ ಥೆರಪಿಯನ್ನು ಉಪಯೋಗಿಸುತ್ತಾರೆ. ದೇಹಕ್ಕೆ ಔಷಧಿ ಕೊಡದೆ ವೈಜ್ಞಾನಿಕವಾಗಿ ಅಂಗೀಕೃತವಾದ ಸಿದ್ಧಾಂತಗಳನ್ನು ಆಧರಿಸಿ ಸಂವಾದದ ಮೂಲಕ ಸೈಕೋಥೆರಪಿ ನೀಡುತ್ತಾರೆ. ಈ ಥೆರಪಿಯಲ್ಲಿ ಮಾತು ಪ್ರಧಾನ ಅಸ್ತ್ರ. ಇದುವರೆವಿಗೂ ಜಗತ್ ಪ್ರಸಿದ್ಧ ಡಾಕ್ಟರ್ ಸಿಗ್ಮಂಡ್ ಫ್ರಾಯ್ಡ್‌ರವರ ಸೈಕೋ ಅನಾಲಿಸಿಸ್ (ಮನೋವಿಶ್ಲೇಷಣೆ) ತತ್ವವನ್ನು ಆಧರಿಸಿ ಚಿಕಿತ್ಸೆ ನೀಡುತ್ತಿದ್ದರು. 1970 ರಿಂದ ಈಚೆಗೆ ಭಾರತವೂ ಸೇರಿದಂತೆ ಬಹುತೇಕ ರಾಷ್ಟ್ರಗಳಲ್ಲಿ ಎರಡು ಹೊಸ ಪಂಥಗಳು ಸೇರಿವೆ.(1)ಡಾ॥ ಫ್ರಿಟ್ಜ್ ಪರ್ಲ್ಸ್ ರವರ 'ಗೆಸ್ಟಾಲ್ಟ್ ಥೆರಪಿ': (2) ಡಾ॥ ಎರಿಕ್ ಬರ್ನ್‌ರವರ 'ಟ್ರ್ಯಾನ್ಸ್ಯಾಕ್ಷನಲ್ ಅನಾಲಿಸಿಸ್'.

ವ್ಯಕ್ತಿ ಒಂದೇ ಸಮಯದಲ್ಲಿ ಮಾನಸಿಕವಾಗಿ ಎರಡು ವೇದಿಕೆಗಳಲ್ಲಿ ಇರುತ್ತಾನೆ. ಒಂದು ವಾಸ್ತವ, ಇನ್ನೊಂದು ಕಲ್ಪನೆ. ಕಲ್ಪನೆಯಲ್ಲಿ ಒಂದು ಗೆಸ್ಟಾಲ್ಟ್ ರೂಪಗೊಂಡು ಅದು ವ್ಯವಸ್ಥಿತವಾಗಿ ಮುಗಿಯದಿದ್ದರೆ ಆತ ತೃಪ್ತಿ ಹೊಂದುತ್ತಾನೆ. ಈ ಗೆಸ್ಟಾಲ್ಟ್ ಸರಣಿ ತುಂಡಾದರೆ ಅತೃಪ್ತಿ, ಅಸಮಾಧಾನ, ಅಸಾಂಗತ್ಯಗಳು ಶುರುವಾಗುತ್ತವೆ. ಆಗ ಮನೋರೋಗಿಯಾಗುತ್ತಾನೆ. ವಾಸ್ತವವಾಗಿ ಈಗ, ಈ ಕ್ಷಣದಲ್ಲಿ ಪರಿಸರಕ್ಕೆ ತಕ್ಕಂತೆ ವರ್ತಿಸುವಂತೆ ಬದಲಾಯಿಸುವುದೇ ಚಿಕಿತ್ಸೆ, ಸೈಕಾಲಜಿಸ್ಟರ ಮುಂದೆ ಹೋಗಿ ನಿಂತರೆ ಸಾಕು ಅವರು ನಮ್ಮ ಮನಸ್ಸನ್ನು ಸರಿ ಮಾಡುತ್ತಾರೆ ಎಂಬುದು ತಪ್ಪು ಕಲ್ಪನೆ. ಥೆರಪಿಸ್ಟ್ ಏನೂ ಮಾಡಲಾರ. ನಕರಾತ್ಮಕ ಜೀವನ ಶೈಲಿಯನ್ನು ರೂಪಿಸಿಕೊಂಡಿರುವ ವ್ಯಕ್ತಿಗೆ ಸಕಾರಾತ್ಮಕ ಜೀವನ ವಿಧಾನವನ್ನು ಅವನೇ ವಿಶ್ಲೇಷಿಸಿ ತಿಳಿಯುವಂತೆ ಥೆರಪಿಸ್ಟ್ ನೋಡಿಕೊಳ್ಳುತ್ತಾನೆ. ಉಪದೇಶ, ಬೋಧನೆ ಮಾಡುವುದಿಲ್ಲ. ಸಲಹೆ ಕೊಟ್ಟರೂ ಅಪರೂಪದ ಸಂದರ್ಭದಲ್ಲಿ ಮಾತ್ರ.

ಫ್ರಾಯ್ಡ್‌ರ ಸೈಕೋ ಅನಾಲಿಸಿನ ಸಿದ್ಧಾಂತಗಳ ಬಗ್ಗೆ ಅತೃಪ್ತಗೊಂಡ ಪರ್ಲ್ಸ್ ಗೆಸ್ಟಾಲ್ಟ್ ಸೈಕಾಲಜಿಯ ಸಿದ್ಧಾಂತ ಆಧರಿಸಿ ಗೆಸ್ಟಾಲ್ಟ್ ಥೆರಪಿ ಎಂಬ ಹೊಸ ತಂತ್ರವನ್ನು ರೂಪಿಸಿದ ಗೆಸ್ಟಾಲ್ಟ್ ಎಂದರೆ ಕನ್ನಡದಲ್ಲಿ "ಪರಿಪೂರ್ಣ ಆಕರ" ಎಂದು ಕರೆಯಬಹುದು.

"ಯಾಕೆ ಹೀಗಾಯಿತು ? ಏನಿದರ ಅರ್ಥ ?

"ಹುಡುಕು. ನನ್ನ ಅರ್ಥ ಇನ್ನೊಬ್ಬರ ಅರ್ಥ ಪ್ರಯೋಜನ ಇಲ್ಲ"

"ನಿನ್ನ ಜೀವನಕ್ಕೆ ನೀನೇ ಅರ್ಥವನ್ನು ಕಂಡು ಹಿಡಿ"

 ಒಡಲಾಳ

"ಸಾಧ್ಯವಿಲ್ಲವಾ ಬಿಟ್ಟುಬಿಡು, ಬೇರೆ ದಾರಿ ಹುಡುಕು"

"ಯಶಸ್ಸು-ಸುಖವನ್ನು ಹುಡುಕುತ್ತಾ ಕೂರಬೇಡ. ಶಕ್ತಿ-ಸಾಮರ್ಥ್ಯವನ್ನು ಉಪಯೋಗಿಸಿ ಅದನ್ನು ತಡೆ, ಅನುಭವಿಸು"

"ಬೇರೆಯವರ ಇಚ್ಛೆಯಂತೆ ಬದುಕಿದರೆ ಮಾತ್ರ ಸಾರ್ಥಕ ಎಂದು ಯಾರು ಹೇಳಿದರು"

"ನೀನು ಹೇಗೆ ತಿಳಿದುಕೊಂಡೆ"

"ಬದುಕಿನಲ್ಲಿ ಸಾರ್ಥಕತೆ ಇಲ್ಲ. ಸಾರ್ಥಕತೆ ಪಡೆಯುವುದೇ ಬದುಕು"

ಇವು ಸಂವಾದದ ಕೆಲವು ತುಣುಕುಗಳು, ಕೈಯಲ್ಲಿ ಚಾಕು ಇದೆಯೆಂದು ಯಾವ ಸರ್ಜನ್ನೂ ಸಿಕ್ಕಾಪಟ್ಟೆ ಕೊಯ್ಯುವುದಿಲ್ಲ. ಹಾಗೆಯೇ ಥೆರಪಿಸ್ಟ್ ಮಾತು ಬರುತ್ತದೆಯೆಂದು ಹೆಚ್ಚಾಗಿ ಮಾತು ಬಳಸುವುದಿಲ್ಲ. ಕೆಲವೊಮ್ಮೆ ರೋಗಿಯ ಜೊತೆಯಲ್ಲಿ ಅವನಂತೆ ಸ್ವಲ್ಪ ದೂರ ಆಲೋಚನೆಯಲ್ಲಿ ಸಾಗಬೇಕಾಗುತ್ತದೆ. ಥೆರಪಿಯಲ್ಲಿ ತತ್ವದ ಆಧಾರದ ಮೇಲೆ ಪರಿಸ್ಥಿತಿಗೆ ತಕ್ಕಂತೆ ಹೊಸ ತಂತ್ರಗಳನ್ನು ಸೃಷ್ಟಿಸಿಕೊಂಡು ಅವನ ಆಲೋಚನೆಗಳ ಥೆರಪಿಸ್ಟ್ ಬದಲಾಯಿಸುತ್ತಾನೆ. ವರ್ತನೆಗಳು ನಮ್ಮವು ಎಂದಾದಲ್ಲಿ ಅವನ್ನು ತಡೆಯುವ ಶಕ್ತಿ ನಮ್ಮಲ್ಲಿ ಇರುತ್ತವೆ.

ಟ್ರಾನ್ಸ್‌ಝ್ಯಾಕ್ಷನಲ್ ಅನಾಲಿಸಿಸ್ (ಟಿಎ) ಎಂದರೆ ತನ್ನ ಸಮಸ್ಯೆಗೆ ಸಂಬಂಧಪಟ್ಟಂತೆ ವ್ಯಕ್ತಿಯೊಬ್ಬ ಸಮಸ್ಯೆ ಪರಿಹಾರ ಆದಾಗ ಹೇಗೆ ವರ್ತಿಸುತ್ತಾನೆ ಎಂದು ಗುರಿಯನ್ನು ಅವನೇ ನಿರ್ಧರಿಸುವಂತೆ ಮಾಡಿ ಆ ಗುರಿಯನ್ನು ಸಾಧಿಸುವಂತೆ ಒಪ್ಪಂದ ಮಾಡಿ ಅದರಂತೆ ಅವನು ಗುರಿಯತ್ತ ಸಾಗುವಂತೆ ಮಾಡುವ ಸೈಕೊ ಥೆರಪಿಯ ಒಂದು ಭಾಗ.

ಡಾ॥ ಎರಿಕ್ ಬರ್ನ್‌ನ ಪ್ರಕಾರ "ಮನೋವಿಶ್ಲೇಷಣೆ" ಅದಕ್ಕೆ ಸಂಬಂಧಪಟ್ಟ ವರ್ತನೆ ಭಾವನೆ ಈ ಮೂರನ್ನು ಸೇರಿಸಿ ಈಗ್ರೋಸ್ಟೇಟ್ಸ್ ಎನ್ನುತ್ತಾನೆ. ಗ್ರೀಕ್ ಭಾಷೆಯಲ್ಲಿ 'ಈಗೋ' ಎಂದರೆ 'ಸ್ಥಿತಿ' ಎಂದರೆ 'ನಾನು ಎಂಬ ಸ್ಥಿತಿ" ಪ್ರತಿಯೊಬ್ಬನಲ್ಲೂ ಮೂರು ಈಗೋ ಸ್ಟೇಟ್‌ಗಳು ಇರುತ್ತವೆ. ಪೇರೆಂಟ್ ಈಗೋ ಸ್ಟೇಟ್, ಅಡಾಲ್ಟ್ ಈಗೋ ಸ್ಟೇಟ್, ಚೈಲ್ಡ್ ಈಗೋ ಸ್ಟೇಟ್ ಇವು ನಿರ್ದಿಷ್ಟ ವರ್ತನೆಯನ್ನು ಹೊಂದಿದ್ದು ಐದು ವರ್ಷದ ಮಗುವಿದ್ದಾಗಲೇ ಈ ಈಗೋ ಸ್ಟೇಟ್‌ಗಳು ಪರಿಪೂರ್ಣಗೊಂಡು ಬೆಳೆಯುವುದನ್ನು ನಿರ್ಧರಿಸುತ್ತದೆ. ಮುಂದೆ ವ್ಯಕ್ತಿ ಜೀವನದ ಉದ್ದಕ್ಕೂ ಐದುವರ್ಷದವರೆಗಿನ ಅನುಭವವನ್ನೇ ಮರು ಅನುಭವ ಪಡೆಯುವುದು ಮಾತ್ರ ನಡೆಯುತ್ತದೆ. ಸೈದ್ಧಾಂತಿಕವಾಗಿ ಮನುಷ್ಯನ ನಿಜವಾದ ವ್ಯಕ್ತಿತ್ವ ಇರುವುದು ಅವನ ಚೈಲ್ಡ್ ಈಗೋ ಸ್ಟೇಟ್‌ನಲ್ಲಿ ಪ್ರತಿಯೊಂದು ಜೀವನ ನಿರ್ಣಯಗಳು ಅಲ್ಲಿಂದ ನಿರ್ಣಯಿಸಲ್ಪಡುತ್ತವೆ. ಈ ಸಿದ್ಧಾಂತವನ್ನು ಸಾಮಾನ್ಯರು ಒಪ್ಪುವುದು ಕಷ್ಟವಾದರೂ ಇದು ವೈಜ್ಞಾನಿಕ ಸತ್ಯ.

ಈ ಮೂರು ಈಗೋ ಸ್ಟೇಟ್‌ಗಳು ಪರಸ್ಪರ ಪೂರಕವಾಗಿ ಇದ್ದು ಸಕಾರಾತ್ಮಕ ಧೋರಣೆಯನ್ನು ಹೊಂದಿದ್ದರೆ ಅಂತಹ ವ್ಯಕ್ತಿ ಜೀವನದಲ್ಲಿ ಯಶಸ್ವಿಯಾಗುತ್ತಾನೆ. ಚೈಲ್ಡ್ ಈಗೋ ಸ್ಟೇಟಿನ ಬಯಕೆಗಳು. ಪ್ರೇರಣೆಗಳು ನಕಾರಾತ್ಮಕವಾಗಿ ಇದ್ದು ಪೇರೆಂಟ್ ಮತ್ತು ಅಡಾಲ್ಟ್‌ಗಳ ಅಭಿಪ್ರಾಯ ಭಿನ್ನವಾದಾಗ ಸಂಘರ್ಷ ಪ್ರಾರಂಭವಾಗುತ್ತದೆ. ಆಗ ಅಡಾಲ್ಟ್ ಮತ್ತು ಪೇರೆಂಟ್‌ಗಳನ್ನು ಉಪಯೋಗಿಸಿಕೊಂಡು ಚೈಲ್ಡ್ ಈಗೋ ಸ್ಟೇಟಿನ ಭಾವನೆಗಳನ್ನು ಥೆರಪಿಸ್ಟ್ ಬದಲಾಯಿಸುತ್ತಾನೆ. ಮನುಷ್ಯ ಹುಟ್ಟುವಾಗ ಸಾಯುವಾಗ ಮಾತ್ರ ಒಂಟಿಯಲ್ಲ. ಸಮಸ್ಯೆಗಳನ್ನು ಸೃಷ್ಟಿಸಿಕೊಳ್ಳುವಾಗಲೂ ಒಂಟಿ. ಆದ್ದರಿಂದ ಅವನ ಸಮಸ್ಯೆಗಳಿಗೆ ಅವನೇ ಹೋರಾಡಬೇಕು. ಘರ್ಷಣೆಯ ಕಾರಣಗಳನ್ನು ಹುಡುಕುವುದು ಥೆರಪಿಯ ಮೊದಲ ಹೆಜ್ಜೆ.

ಆಬಾಲವೃದ್ಧರಾದಿಯಾಗಿ ಪ್ರತಿಯೊಬ್ಬರಿಗೂ ಘಾತದ ಹಸಿವು (ಸ್ಟ್ರೋಕ್ ಹಂಗರ್) ಜೀವನದ ಉದ್ದಕ್ಕೂ ಇರುತ್ತದೆಯೆಂದು ಬರ್ನ್ ಹೇಳುತ್ತಾರೆ. ಸ್ಪರ್ಶದಿಂದ ಮಾತ್ರ ಓಂಗುವ ಈ ಘಾತಗಳು ಜೀವನ ಪರ್ಯಂತ ಬೇರೆ ಬೇರೆ ಸಂದರ್ಭದಲ್ಲಿ ಸಿಹಿ ಮತ್ತು ಕಹಿ ಘಾತಗಳಾಗಿ ದೊರೆಯುತ್ತಲೇ ಇರುತ್ತವೆ. ತನ್ನ ಪರಿಸರಕ್ಕೆ ಸಿಹಿ ಘಾತವನ್ನು ಎಷ್ಟು ಹೇಗೆ ಕೊಡುತ್ತಾನೆ, ಪರಿಸರದಿಂದ ಎಂತಹ ಘಾತ ಸಿಗುವಂತೆ ವರ್ತಿಸುತ್ತಾನೆ. ತನಗೆ ಸಿಕ್ಕ ಸಿಹಿ ಘಾತವನ್ನು ಏನು ಮಾಡುತ್ತಾನೆ. ಎಂಬುದನ್ನು ಆಧರಿಸಿ ಅವನ ಜೀವನದ ಸೋಲುಗೆಲುವುಗಳನ್ನು ನಿರ್ಧರಿಸಬಹುದು. ಜೀವನದಲ್ಲಿ ಸಿಹಿಘಾತವನ್ನು ಹೆಚ್ಚಿಸಿಕೊಳ್ಳುತ್ತಾ ತಾನೂ ಬದಲಾಗುವ ಸಾಧ್ಯತೆ ಇದೆ. ಸಹಜ ಭಾವನೆಗಳನ್ನು ಹತ್ತಿಕ್ಕಿ ವಿರುದ್ಧವಾಗಿ ವರ್ತಿಸುವುದು, ನೋವು, ದುಃಖ ವ್ಯಥೆಗಳನ್ನು ಮಾತ್ರ ಸಂಗ್ರಹಿಸುವುದು, ಬೇರೆಯವರ ಹುಳುಕುಗಳನ್ನು ಹುಡುಕುವುದು ಹಿಂದೆಗೆಯುವ ಮನೋಭಾವ ಇವೆಲ್ಲಾ ಅಸ್ವಸ್ಥತೆಗೆ ಎಡೆಮಾಡಿ ಕೊಡುತ್ತವೆ. ಮುಖ್ಯವಾಗಿ ತನ್ನ ಪಾತ್ರದ ನಡೆ, ವ್ಯವಸ್ಥೆ, ಅಂತ್ಯಗಳ ಸ್ಕ್ರಿಪ್ಟ್ ಬಾಲ್ಯದಲ್ಲೇ ಸ್ಥಿರಗೊಂಡಿದ್ದರೂ ಸಿದ್ಧಗೊಂಡ ಜೀವನ ನಾಟಕದ ಹಾದಿಯಲ್ಲಿ ಸಿಹಿ ಘಾತಗಳನ್ನು ಹೆಚ್ಚಿಸಿಕೊಳ್ಳುವುದರ ಮೂಲಕ ಯಶಸ್ವಿಯಾಗಬಹುದು.

"ಈಗೋಸ್ಟೇಟ್‌ಗಳು" "ಘಾತಗಳು" "ಗೆಸ್ಟಾಲ್ಟ್' ಮುಂತಾದ ಶಬ್ದಗಳು ಇಲ್ಲಿ ಗೊಂದಲವನ್ನು ಉಂಟು ಮಾಡಬಹುದು. ಕೃತಿಯನ್ನು ಓದುವಾಗ ಇವುಗಳ ಪಾತ್ರದ ಅರಿವಾಗುತ್ತದೆ. ಒಬ್ಬ ಥೆರಪಿಸ್ಟ್ ಸಮಸ್ಯೆಗಳ ವಿಂಗಡಣೆಗಾಗಿ ಈ ಶಬ್ದಗಳನ್ನು ಬಳಸಿಕೊಳ್ಳುತ್ತಾನೆ. ಸಾಮಾನ್ಯನಿಗೆ ಇದಾವುದೂ ಬೇಕಾಗಿಲ್ಲ. ತನ್ನ ಸಮಸ್ಯೆಯ ಕಾರಣಗಳನ್ನು ಹುಡುಕಿಕೊಂಡರೆ ಸಾಕು. ತೊಂದರೆ, ಸಮಸ್ಯೆಗಳು ಬೇರೆಡೆಯಿಂದ ಆಯಿತು ಎಂದು ತನ್ನ ಹೊಣೆಗಾರಿಕೆಯನ್ನು ಬೇರೆಡೆಗೆ ವರ್ಗಾಯಿಸಿ ನಿಶ್ಚಿಂತೆ ಮತ್ತು ಅಂತರ್ ಮುಕ್ತಿಯನ್ನು ಅನುಭವಿಸುವವರೇ ಹೆಚ್ಚು. ಒಂದು ಮನೆಯಲ್ಲಿ ರೇಡಿಯೋ ಕೇಳುತ್ತಿಲ್ಲ ಎಂದಾದರೆ ಆ ಮನೆಯಲ್ಲಿ ರೇಡಿಯೋನೇ ಇಲ್ಲ ಎಂದು ಅರ್ಥವಲ್ಲ. ರೇಡಿಯೋವನ್ನ ಆನ್ ಮಾಡಬೇಕು ಅಷ್ಟೇ. ಈ ಆನ್ ಮಾಡುವ ಕೆಲಸವನ್ನು ಥೆರಪಿಸ್ಟ್ ಮಾಡುತ್ತಾನೆ.

ಸೈಕಿಯಾಟ್ರಿಸ್ಟ್‌ನ ಮಗ ಮಾದಕ ವಸ್ತುಗಳ ವ್ಯಸನಿ, ಸೈಕಾಲಜಿಸ್ಟ್‌ನ ಮಗಳು ತೀವ್ರಖಿನ್ನತೆಯಿಂದ ಬಳಲುತ್ತಿದ್ದಾಳೆ. ಸೈಕೊಥೆರಪಿಸ್ಟ್‌ನ ಹೆಂಡತಿ ಜಗಳ ಗಂಟಿ ಇತ್ಯಾದಿ ಆಭಾಸಗಳನ್ನು ನಾವು ಕೇಳುತ್ತಿರುತ್ತೇವೆ. "ಸೈಕಾಲಜಿ ಗೊತ್ತಿದ್ದೂ ಇವರು ಯಾಕೆ ಸರಿಪಡಿಸಿಕೊಂಡಿಲ್ಲ" ಎನ್ನಿಸುತ್ತದೆ. ಹಾಗೇ ಪಂಜಾಬ್, ಕಾಶ್ಮೀರ ದಕ್ಷಿಣ ಆಫ್ರಿಕಾದಲ್ಲಿ ನಡೆಯುವ ಹತ್ಯಾಕಾಂಡಗಳನ್ನು ನಿಲ್ಲಿಸಲು, ಭಯೋತ್ಪಾದಕರ ಮನಸ್ಸನ್ನು ಬದಲಾಯಿಸಲು ದೊಡ್ಡ ದೊಡ್ಡ ಸೈಕಾಲಜಿಸ್ಟ್‌ಗಳ ನಿಯೋಗವನ್ನು ಕಳಿಸಿದರೆ ಸಮಸ್ಯೆ ಹುಟ್ಟುವುದೇ ಇಲ್ಲ. ಸೈಕೋಥೆರಪಿಸ್ಟ್‌ಗೆ ರಾಜ್ಯಾಡಳಿತ ವಹಿಸಿ ಹಿಪ್ನಾಟಿಸ್ಟರ ಮೂಲಕ ಕರ ವಸೂಲಿ ಮಾಡಿದರೆ ಎಷ್ಟು ಸುಗಮ ಎನ್ನುವ ಕಲ್ಪನೆ ಬರಬಹುದು. ಇದೆಲ್ಲಾ ಸಾಧ್ಯವೇ ಇಲ್ಲ. ಯಾಕೆಂದರೆ 'ಇನ್ನೊಬ್ಬನ ಮನಸ್ಸನ್ನು ಸರಿ ಪಡಿಸಬಹುದು, ಬದಲಾಯಿಸಬಹುದು ಎಂಬ ಭಾವನೆಯೇ ತಪ್ಪು, ಯಾರೊಬ್ಬರೂ ಇನ್ನೊಬ್ಬರ ಮನಸ್ಸನೇ ಆಗಲಿ, ವರ್ತನೆಯನ್ನೇ ಆಗಲಿ, ಜೀವನ ಶೈಲಿಯನ್ನೇ ಆಗಲಿ ಬದಲಾಯಿಸಲು ಸಾಧ್ಯವೇ ಇಲ್ಲ. ಬದಲಾವಣೆ ಬೇಕಾದವರು ತಾವೇ ಬದಲಾವಣೆ ಮಾಡಿಕೊಳ್ಳಬೇಕು. ಹಾಗೆ ಬದಲಾವಣೆ ಮಾಡಿಕೊಳ್ಳ ಬಯಸುವವರಿಗೆ ಮಾತ್ರ ಸೈಕಾಲಜಿಯ ಸಿದ್ಧಾಂಗಳು ಸಾಧನ ಆಗುತ್ತವೆ. ಕೇವಲ ಸಾಧನ ಸೈಕಾಲಜಿಯ ಬಗ್ಗೆ ಓದಿದರೆ, ಚರ್ಚೆ ಮಾಡಿದರೆ ಬದಲಾವಣೆ ಬರುವುದಿಲ್ಲ ಸಮಸ್ಯೆಯನ್ನು ಪರಿಹರಿಸಿಕೊಳ್ಳ ಬೇಕೆಂದು ಇಚ್ಛೆ ಇದ್ದು ಸೈಕಾಲಜಿಯ ಸಿದ್ಧಾಂತದ ಹಾದಿಯಲ್ಲಿ ಕ್ರಮಿಸಿದರೆ ಮಾತ್ರ ಯಶಸ್ಸು ಸಾಧ್ಯ. ಥೆರಪಿಸ್ಟ್‌ನ ವಿಶೇಷವೇನೆಂದರೆ ಯೋಜನೆ, ಭಾವನೆ, ವರ್ತನೆಗಳಿಗೆ, ವಿಜ್ಞಾನವನ್ನು ಆಧರಿಸಿ, ತಂದೆ-ತಾಯಿ, ಮೇಷ್ಟ್ರು, ರಾಜಕಾರಣಿಗಿಂತ ಹೆಚ್ಚು ವ್ಯವಸ್ಥಿ ತವಾಗಿ ನಿರ್ದಿಷ್ಟ ಬದಲಾವಣೆ ಸಾಧ್ಯವಾಗುವಂತ ತಂತ್ರ ರೂಪಿಸುತ್ತಾನೆ. ಇದಕ್ಕೆ ಬಹಳಷ್ಟು ಸಮಯ ಬೇಕಾಗುತ್ತದೆ. ಸಮಸ್ಯೆ ಒಂದು ತಂತ್ರಕ್ಕೆ ಬಲಿಯಾಗದಿದ್ದರೆ ಮತ್ತೊಂದು ಹೊಸ ತಂತ್ರವನ್ನು ಯೋಜಿಸುತ್ತಾನೆ. ಥೆರಪಿಸ್ಟನ ಯಾವ ತಂತ್ರಕ್ಕೂ ಬಲಿ ಬೀಳದಿದ್ದರೆ ? ಥೆರಪಿಸ್ಟ್ ಏನೂ ಮಾಡಲಾರ !

ಮಾನಸಿಕ ಸಮಸ್ಯೆ ವಾಸಿಯಾಗುತ್ತದೆ ಎಂದು ನಿರ್ಧರಿಸಿ, ವಾಸಿಮಾಡಿ ಕೊಳ್ಳುತ್ತೇನೆ ಎಂಬ ನಿಲುವನ್ನು ತಾಳಿ ಸೈಕೊಥೆರಪಿಯನ್ನು ಸ್ವೀಕರಿಸಿದ್ದರೆ ಯಶಸ್ಸಿನ ಸಾಧ್ಯತೆ ಹೆಚ್ಚು. ನಾವು ಹೇಳಿದಂತೆ ಪರಿಸರ ಕೇಳಬೇಕು ಎಂಬ ಹಠವನ್ನು ಬಿಟ್ಟು ಪರಿಸರದಂತೆ ನಾವು ಹೊಂದಿಕೊಳ್ಳಬೇಕು ಎಂಬ ಹೊಸ ಎಚ್ಚರ ರೋಗಿಗೆ ಮೂಡುತ್ತದೆ ಇದು ಸೋಲು ಎಂದು ಅರ್ಥವಲ್ಲ. ಸಮಸ್ಯೆಯನ್ನು ನೋಡುವ ದೃಷ್ಟಿ ಬದಲಾಯಿ ಸುವುದು. ಅದಕ್ಕೆ ತಕ್ಕಂತೆ ತನ್ನ ಯೋಚನೆ ಭಾವನೆಗಳನ್ನು ನಿಯಂತ್ರಿಸುವುದು ಮಾತ್ರ

ಈ ಮಾತಿಗೆ ಪೂರಕವಾಗುವಂತೆ ನನ್ನ ಸ್ಟಾಕ್‌ನಲ್ಲಿನ ಒಂದು ಜೋಕ್ ಹೇಳಿದರೆ ತಪ್ಪಾಗಲಾರದು ಎಂದುಕೊಳ್ಳುವೆ.

ಒಬ್ಬ ಜೀವಾವಧಿ ಶಿಕ್ಷೆಗೆ ಒಳಗಾಗಿರುವ ಕೈದಿ. ಅವನ ಹೆಂಡತಿ ಸುರ ಸುಂದರಿ. ಪ್ರತಿ ದಿನ ಗಂಡನನ್ನು ನೋಡಲು ಜೈಲಿಗೆ ಬರುತ್ತಾಳೆ. ಹೀಗೆ ಜೈಲಿನ ಅಧಿಕಾರಿಗೂ ಅವಳಿಗೂ ಪ್ರೇಮ ಸಂಪರ್ಕ ಶುರುವಾಯಿತು. ಗಂಡನನ್ನು ನೋಡಲು ಬರುವ [illegible]

ಸಪದಲ್ಲಿ ಅಧಿಕಾರಿಯೊಂದಿಗೆ ಸಲ್ಲಾಪ ನಡೆಸುವಳು. ಈ ವಿಷಯ ಅಕ್ಕಪಕ್ಕದಲ್ಲಿರುವ ಪೈದಿಗಳಿಗೆ ತಿಳಿಯಿತು. ಅವರು ಅವಳ ಗಂಡನಿಗೆ ಹೇಳಿದರು. ಆತ ಕೆಲವು ದಿನ ಖಿನ್ನನಾದ. ಆವರೆ ಏನು ಮಾಡಲಾಗದ ಅಸಹಾಯಕ, ಪಕ್ಕದ ಪೈದಿಗಳ-ಗೇಲಿ ಹೆಚ್ಚಾಯಿತು. ಬಹಳ ಯೋಚಿಸಿ ಒಮ್ಮೆ ಹೇಳಿದ "ಹುಚ್ಚಪ್ಪಗಳಿರಾ ಅವಳು ನನ್ನ ಹೆಂಡತಿಯಲ್ಲ, ಅಧಿಕಾರಿಯ ಹೆಂಡತಿ, ನನ್ನ ಮೇಲಿನ ಪ್ರೀತಿಗಾಗಿ ಆಗಾಗ ನನ್ನ ಬಳಿಯೂ ಬರುತ್ತಿರುತ್ತಾಳೆ ಅಷ್ಟೇ !" ಎಂದು ಹೇಳಿ ನಕ್ಕು ಬಿಟ್ಟನಂತೆ !

ಇವನು ಹೆಂಡತಿಯ ಪೌಲ್ಯ, ಗುಣ, ಸ್ವಭಾವಗಳಿಗೆ ಬೇರೊಂದೆ ಅರ್ಥವನ್ನು ಹಚ್ಚಿ, ಸಮಸ್ಯೆಯನ್ನು ಬೇರೆ ದೃಷ್ಟಿಯಿಂದ ನೋಡಿದ. ಅಸಹಾಯಕ ಸ್ಥಿತಿಯಲ್ಲಿ ಅವನ ಬಳಿ ಪರಿಹಾರವಾಗಿ ಇದ್ದದ್ದು ಇದೊಂದೇ ಸೂಕ್ತದಾರಿ.

ಸೈಕೋಥೆರಪಿಯಲ್ಲಿ ತನ್ನನ್ನ ತಾನು ಸ್ಪಡಿ ಮಾಡಿಕೊಳ್ಳಬೇಕಾಗುತ್ತದೆ. ನಮ್ಮೊಳಗನ್ನು ನಾವು ನೋಡಿದಾಗ ಒಮ್ಮೆಲೇ ಗೊಂದಲ, ಭಯ, ನಾಚಿಕೆ, ಪಾಪ ಪ್ರಜ್ಞೆಗಳು ಉದ್ಭವಿಸಬಹುದು, ಆಗ ಸೈಕಾಲಜಿ ನೆರವಿಗೆ ನಿಲ್ಲುತ್ತದೆ. ಸೈಕೊಥೆರಪಿಸ್ಟ್ ಬೇಕಾಗುತ್ತಾನೆ. ನಮ್ಮ ವ್ಯಕ್ತಿತ್ವದ ಚಿತ್ರವನ್ನು ನಮ್ಮ ಕೈಯಿಂದಲೇ ಬಿಡಿಸಿ ತೋರಿಸಿ ಹೊಸಚಿತ್ರ ರೂಪಿಸಲು ನೆರವಾಗುತ್ತಾನೆ. ಅಡಿಗರ "ನಿನಗೆ ನೀನೇ ಗೆಳೆಯ, ನಿನಗೆ ನೀನೇ" ಪದ್ಯ ನೆನಪಾಗುತ್ತದೆ. ಅಲ್ಲವೆ ?

'ಮನಸ್ಸಿಲ್ಲದ ಮಾರ್ಗ" ಈ ಕೃತಿಯಲ್ಲಿ ಬರೀ ಸಿದ್ಧಾಂತಗಳ ಹೇರಿಕೆ ಇಲ್ಲ. ಕುತೂಹಲವಾಗಿ, ಸರಳ ಭಾಷೆಯಲ್ಲಿ ಲಘು ಹಾಸ್ಯದೊಂದಿಗೆ ಸಮಸ್ಯೆ ಬಿಡಿಸುವ ತಂತ್ರ ಓದುವಿಕೆಯಲ್ಲಿ ಆಸಕ್ತಿ ಮೂಡಿಸುತ್ತದೆ, ಡಾ॥ ಸುಬ್ರಮಣ್ಯಂ ಅವರು ಸಮಸ್ಯೆಯಿಂದ ತೊಳಲುವ ಕೇಸುಗಳೊಂದಿಗೆ ಮುಖಾಮುಖಿ ಸಂವಾದ ಮಾಡುವುದು ತಂತ್ರಗಳ ಜಾಲವನ್ನ ಅರಿವಿಗೆ ಬಾರದಂತೆ ಹರಡುವುದು ಹಾಗೂ ಸಮಸ್ಯೆಯ ಮೂಲವನ್ನು ಮನಮುಟ್ಟುವಂತೆ ವಿವರಿಸಿದ್ದಾರೆ. ಇಲ್ಲಿ ಬರುವ ಗಂಗಾ, ಶೈಲ, ಕುಸುಮ, ಡಾ॥ ಗಿರಿ, ಸುಜಯ, ಬಸವರೆಡ್ಡಿ ಇವರ ಸಮಸ್ಯೆಗಳಲ್ಲಿ ನಮ್ಮದೂ ಇರಬಹುದು, ಓದುತ್ತಾ ನಮ್ಮ ಸಮಸ್ಯೆಯನ್ನ ನಾವೇ ಬಿಡಿಸಿಕೊಂಡಂತೆ ಅನ್ನಿಸಬಹುದು ಪುಸ್ತಕ ಹಿಡಿದ ಕೈಯಲ್ಲೇ ಓದಿ ಮುಗಿಸುವಷ್ಟರಲ್ಲಿ ನಾವು ಕುಳಿತಲ್ಲೇ ನೀರೊಸೆಂಟರ್ ಒಂದನ್ನ ಸುತ್ತಿ ಬಂದ ಅನುಭವವಾಗುತ್ತದೆ. ಮಾನಸಿಕ ಸಮಸ್ಯೆಗಳು ಎಂದರೆ ಯಾವುವು ? ಅವುಗಳ ಚಿಕಿತ್ಸಾವಿಧಾನದ ತಂತ್ರಗಳು ಹೇಗಿರುತ್ತವೆ ? ಆರೋಗ್ಯಕರ ಜೀವನಕ್ಕೆ ಮನಸ್ಸು (ನಾವು) ಹೇಗೆ ವರ್ತಿಸಬೇಕು ಎಂಬ ಹೊಸ ಅರಿವು ಮೂಡಿ, ಜ್ಞಾನಕ್ಷಿತಿಜ ವಿಸ್ತರಿಸುತ್ತದೆ. ಆದ್ದರಿಂದಲೇ ನಾನು ಈ ಕೃತಿಯನ್ನು 'ವೇದದ ಕುಲುಕು" ಎಂದು ಕರೆದದ್ದು. □ **ಟಿ. ಎಂ. ಷಡಕ್ಷರಿ**

ಪುಸ್ತಕ : ಮಾನಸಿಕ ರೋಗಗಳಿಗೆ 'ಮನಸ್ಸು ಇಲ್ಲದ ಮಾರ್ಗ"
ಲೇಖಕರು : ಮೀನಗುಂಡಿ ಸುಬ್ರಮಣ್ಯಂ
ಪ್ರಕಾಶನ : ನವಕರ್ನಾಟಕ ಪಬ್ಲಿಕೇಶನ್ ಪ್ರೈವೇಟ್ ಲಿಮಿಟೆಡ್
ಎಂ.ಬಿ.ಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು_560001.
ಪುಟಗಳು : IV+324. ಬೆಲೆ : 40 ರೂಪಾಯಿ

# ರಾಬರ್ಟ್ ಫ್ರಾಸ್ಟ್‌ನ "MENDING WALL", ಒಂದು ಪ್ರಯತ್ನ

ಇಪ್ಪತ್ತನೇ ಶತಮಾನದ ಆರಂಭ ದಶಕದ ಅಮೇರಿಕಾದಲ್ಲಿ ಸಾಹಿತ್ಯದ ನವೋದಯವಾಯಿತು ಎಂಬುದಾಗಿ ವಿದ್ವಾಂಸರು ಸ್ಪಷ್ಟವಾಗಿ ಗುರುತಿಸುತ್ತಾರೆ. ಸಾಹಿತ್ಯವರೇಣ್ಯರ ಒಂದು ದೊಡ್ಡ ಗುಂಪನ್ನೇ ನಾವಿಲ್ಲಿ ಸ್ಮರಿಸಬಹುದು. ಅದರಲ್ಲಿ ಬಹು ಮುಖ್ಯವಾಗಿ ಮಾರ್ಕ್ ಟ್ವೈನ್, ಹರ್ಮನ್ ಮೆರ್‌ವಿಲೆ, ವಾಲ್ಟ್ ವ್ಹಿಟ್‌ಮನ್‌ರಂತಹ ಅಗ್ರ ಕವಿಗಳು–" ಅಮೇರಿಕನ್ ಸಾಹಿತ್ಯ ಎಂಬುದೇನಾದರೂ ಇದೆಯೇ ? ಎಂಬ ಪ್ರಶ್ನೆಗೆ ಮರುಸವಾಲಾಗಿ ನಿಲ್ಲುತ್ತಾರೆ.

1875 ರಲ್ಲಿ ಅಮೇರಿಕಾದ ಕ್ಯಾಲಿಫೋರ್ನಿಯಾದಲ್ಲಿ ಜನಿಸಿದ ರಾಬರ್ಟ್ ಫ್ರಾಸ್ಟ್ ಡಾರ್ಟ್‌ಮರ್ತ್, ಹಾರ್ವರ್ಡ್‌ನಲ್ಲಿ ಕಲಿಯುತ್ತಿರುವಾಗ ಲ್ಯಾಟಿನ್, ಗ್ರೀಕ್ ಹಾಗೂ ತತ್ವಶಾಸ್ತ್ರಗಳಿಗೆ ಮನಸೋತು ಹೋಗಿದ್ದ. ನಂತರ ಕೆಲಕಾಲ ಇಂಗ್ಲೇಂಡಿನಲ್ಲಿದ್ದು ಜ್ಯಾರ್ಜಿಯನ್ ಕವಿಗಳ ಗೆಳೆತನ ಸಂಪಾದಿಸಿದ ನಂತರ ಸಾಹಿತ್ಯ ವೃತ್ತಿಯನ್ನು ಆದ್ಯಂತವಾಗಿ ಅಭ್ಯಾಸ ಮಾಡಿ ಗಣ್ಯಕವಿಯೆಂದು ಹೆಸರು ಸಂಪಾದಿಸಿದ ಇಂಗ್ಲೀಷ್ ಸಾಹಿತ್ಯಲೋಕದಲ್ಲಿ ತನ್ನ ಸಮಕಾಲೀನವರಾದ ಎಜ್ರಾ ಪೌಂಡ್ ಹಾಗೂ ಟಿ. ಎಸ್. ಎಲಿಯಟ್‌ರಂತಹ ಉದ್ದಾಮರ ನಡುವೆಯೂ ಫ್ರಾಸ್ಟ್ ತನ್ನದೇ ಆದ ವಿಶಿಷ್ಟ ಸ್ಥಾನ ಗಳಿಸಿಕೊಂಡು ಮೆರೆದಿದ್ದಾನೆ.

ಫ್ರಾಸ್ಟ್‌ನ ಕವನ ಸಂಕಲನಗಳಾದ A Boys Will, North Boston, Mountain Interval, New Hampshire, West Running Brook, A Further Range ಹಾಗೂ A Masque of Reason ಮೊದಲಾದವು ಆತನೊಬ್ಬ ಮಹತ್ವದ ಕವಿಯೆಂದು ಸಾರಿ ಹೇಳುತ್ತೇವೆ.

ಫ್ರಾಸ್ಟ್‌ನ ಎಲ್ಲಾ ಕವನಗಳ ವಸ್ತು-ಧ್ಯೇಯಗಳನ್ನು ಗಮನದಲ್ಲಿಟ್ಟು ಕೊಂಡು ವಿಮರ್ಶಕರು ನಾಲ್ಕು ವಿಭಾಗಗಳಾಗಿ ವಿಂಗಡಿಸುತ್ತಾರೆ. 1 ಮನುಷ್ಯ ಮತ್ತು ಪ್ರಕೃತಿ 2 ಆರ್ಥಿಕ-ಸಮಸ್ಯೆಗಳು 3 ಪ್ರೀತಿ. ಭಯ ಹಾಗೂ ವಿಭ್ರಮೆ 4 ಒಂಟಿತನ ಮತ್ತು ಬದ್ಧತೆ.

ಫ್ರಾಸ್ಟ್‌ನ ಯಾವುದೇ ಒಂದು ಕವನವನ್ನು ಮಾದರಿಯಾಗಿ ನಾವು ಅಭ್ಯಸಿಸುವುದಾದರೆ ಬಾಹ್ಯರೂಪದಲ್ಲಿ ಅದು ಸರಳವಾಗಿಯೂ, ಒಂದು ಘಟನೆಯನ್ನು ಕುರಿತ ನಿರೂಪಣೆಯನ್ನು ಕಾಣಬಹುದು. ಆದರೆ ಸರಳತೆಯೇ ಕವನದ ಸ್ವರೂಪ ವಾಗಿರದೆ ಓದುತ್ತಾ ಹೋದಂತೆ ಅರ್ಥವಂತಿಕೆಯ ವಿವಿಧ ಪದರಗಳು ನಮ್ಮ ಕಣ್ಣೆದೆ

[illegible]

ಬಿಚ್ಚಿಕೊಳ್ಳುತ್ತಾ ಹೋಗುವ ಗುಣ ಅವನ ಕವನಗಳಲ್ಲಿ ಸಾಕ್ಷಾತ್ಕಾರಗೊಳ್ಳುತ್ತಾ ಹೋಗುತ್ತದೆ.

"ಆಮ್ಮೆ-ಸಮಸ್ಯೆಗಳು" ಗುಂಪಿಗೆ ಸೇರ್ಪಡೆಯಾಗಿರುವಂತಹ "Mending Wall" ಎಂಬ ಕವನ ಈವರೆಗೂ **ಅತಿ ಹೆಚ್ಚು ಸಂಕಲಿತವಾದದ್ದು** ಅದರ ವಸ್ತು-ಉದ್ದೇಶಗಳನ್ನು ಅಭ್ಯಸಿಸುವುದು ಸದ್ಯದ ಒಂದು ಪ್ರಯತ್ನ.

Mending Wall ಕವನವು ಇಬ್ಬರು ನೆರೆಯವರ ನಡುವಿನ ಪ್ರತ್ಯೇಕತೆಯ ಬಗ್ಗೆ ಮೇಲ್ನೋಟದ ನಿರೂಪಣೆ ನೀಡುತ್ತ **"ಗೋಡೆ"** ಎಂಬುದು ಸಂಕೇತವಾಗಿ ಪರಿಣಮಿಸಿ ಕವನವನ್ನು ಓದುತ್ತಾ ಹೋದಂತೆ ಮನುಷ್ಯ-ಮನುಷ್ಯನ ನಡುವೆ ನಿರ್ಮಾಣವಾಗಿರುವ ಜಾತಿ, ಮತ, ಧರ್ಮ, ದೇಶಗಳ ಭೇದ ಸ್ಪಷ್ಟ ರೂಪವಾಗಿ ಬೆಳೆದು ಮಾನವನ ವಿಚಾರಹೀನತೆ, ಕೂಡಿಬಾಳುವ ಕೊರತೆಗೆ ಕೈಗನ್ನಡಿಯಾಗಿ ಚಿತ್ತ ಕಲಕುವಂತೆ ಮಾಡುತ್ತದೆ. ಕವನದ ಮೊದಲನೆ ಸಾಲು, "ಪ್ರತ್ಯೇಕತೆ ಇಲ್ಲದಿರುವಿಕೆಯನ್ನು ಬಯಸುವುದರಲ್ಲಿ ಏನೋ ವಿಶೇಷತೆ ಇದೆ" ಎಂಬುದು ಒಬ್ಬ ರೈತನ ಆದರ್ಶ ವಿಚಾರವಾದರೆ ಮತ್ತೊಬ್ಬ ರೈತ ಒಳ್ಳೆಯ ಗೋಡೆಗಳು ಒಳ್ಳೆಯ ನೆರೆಹೊರೆಯವರನ್ನು ನಿರ್ಮಿಸುತ್ತವೆ ಎಂದು ವ್ಯವಸ್ಥೆಯ ಮಾತನ್ನಾಡುತ್ತಾನೆ. ಆದರ್ಶ ಮತ್ತು ವ್ಯವಸ್ಥೆಗಳ ನಡುವೆ ಫ್ರಾಸ್ಟ್ ಕವನವನ್ನು ನಾಟಕೀಯವನ್ನಾಗಿಸುತ್ತಾ ಹಲವು ಸ್ತರಗಳಿಗೆ ನಮ್ಮನ್ನು ಒಯ್ದು, ಪ್ರಶ್ನೆಗಳಿಂದ ಸತಾಯಿಸಿ ಒಗ್ಗಾ ಮುಗ್ಗಾ ಎಳೆದಾಡುತ್ತಾನೆ. ವ್ಯಕ್ತಿಯ ಅನುಭವ ಹಾಗೂ ಸ್ವಭಾವಗಳ ಜಟಿಲವಾದ ಸಂಯೋಜನೆಯೇ ಕಾವ್ಯದ ಅತ್ಯಂತ ಆಕರ್ಷಕ ವಸ್ತುವಾಗಿದೆ.

ಇಡೀ ಕವನ 45 ಸಾಲುಗಳಿಂದ ಕೂಡಿದ್ದು ಒಬ್ಬ ಪ್ರಗತಿಶೀಲ ಮನೋಭಾವದ ರೈತ (ಕವಿ) ಹಾಗೂ ಮೊಂಡು ಸ್ವಭಾವದ ರೈತನ ವ್ಯಕ್ತಿ ಚಿತ್ರಣಗಳು ಪ್ರತಿಬಿಂಬಿತವಾಗಿ ಸಮಾನ ಹಾಗೂ ವೈರುಧ್ಯ ಮನೋಧರ್ಮಗಳ ಜೊತೆಗೆ ಪ್ರಸ್ತುತ ಸಂಘರ್ಷಗಳು ಕವನದ ವ್ಯಾಪ್ತಿಯನ್ನು ಹಿಗ್ಗಿಸುತ್ತಾ ಹೋಗುತ್ತವೆ.

ಕವನದಲ್ಲಿ ಬರುವಂತಹ ಸಾಂದರ್ಭಿಕ ಘಟನೆ ಹೀಗಿದೆ ಇಬ್ಬರು ರೈತರಿಗೆ ಸೇರಿದ ಜಮೀನುಗಳ ನಡುವೆ ಒಂದು ಕಾಲದಲ್ಲಿ ನಿರ್ಮಾಣವಾಗಿದ್ದ ಗೋಡೆ ಈಗ ಬಿದ್ದು ಶಿಥಿಲವಾಗಿದೆ. ಗೋಡೆ ಬಿದ್ದು ಹೋಗಲು ಪ್ರಕೃತಿ ಸಹಜ ಅಥವಾ ಮನುಷ್ಯ ಸಾಧ್ಯ ಕಾರಣಗಳಿರಬಹುದು. ಗೋಡೆಗೆ ಕಂದಕ ಬಿದ್ದಿದ್ದು ಇಬ್ಬರು ವ್ಯಕ್ತಿಗಳು ಮುಖಾಮುಖಿಯಾಗಿ ನಡೆದಾಡಬಹುದಾದಷ್ಟು ದೊಡ್ಡದಾಗಿದೆ, ಈ ಇಬ್ಬರು ರೈತರು ಸುಗ್ಗಿ ಸಮಯದ ಒಂದು ದಿನ ಇದನ್ನು ಗಮನಿಸುತ್ತಾರೆ. ಸರಿ ರಿಪೇರಿ ಕೆಲಸ ಪ್ರಾರಂಭವಾಗುತ್ತದೆ ಇಬ್ಬರು ಸೇರಿ ಗೋಡೆಯನ್ನು ಪುನಃ ಕಟ್ಟುತ್ತಾ ಹೋಗುತ್ತಾರೆ ಗೋಡೆ ಕಟ್ಟುತ್ತಾ ಹೋದಂತೆ ಇಬ್ಬರೂ ಪ್ರತ್ಯೇಕವಾಗುತ್ತಾ ಹೋಗುತ್ತಾರೆ. ಈ ಸಂದರ್ಭದಲ್ಲಿ ಕವಿ ಆಲೋಚಿಸಲು ಉಪಕ್ರಮಿಸುತ್ತಾನೆ. ಅವನ ವಾದ ಹೀಗೆ ಸಾಗುತ್ತದೆ. ಕವಿಯದು ಸೇಬು ಹಣ್ಣಿನ ತೋಟ ನೆರೆಯವನದು ಪೈನ್ ಮರಗಳ ತೋಟ. ಈ ಮರಗಳು ಒಂದಕ್ಕೊಂದು ಅತ್ತ ಹಾಯ್ದು ಕಬಳಿಸುವುದಿಲ್ಲ. ಇಷ್ಟರ

೧೯ ಬಸಾಲು

ಮೇಲೆ ಸಸಿಗಳನ್ನು ಹಾಳುಗೆಡವಲು ಯಾವುದೇ ಪಶುಗಳು ಅಲ್ಲಿಲ್ಲ. ಹೀಗಿರುವಾಗ ಗೋಡೆಯ ಪುನರ್‌ನಿರ್ಮಾಣದ ಅವಶ್ಯಕತೆಯಾದರೂ ಏನು ? ಬೌದ್ಧಿಕವಾಗಿ ವಿಚಾರವಂತನಾದ ಈ ರೈತ ಇನ್ನೂ ಹೆಚ್ಚು ಆಲೋಚಿಸುತ್ತಾನೆ. ವಿರೋಧಾಭಾಸದ ವಿಚಾರವೆಂದರೆ ಗೋಡೆ ಪ್ರತ್ಯೇಕತೆ ನಿರ್ಮಿಸುವುದರ ಜೊತೆ-ಜೊತೆಗೆ ವ್ಯಕ್ತಿಗಳನ್ನು ಅಥವಾ ಏನನ್ನಾದರೂ ಗುರುತಿಸುವ ಸಾಧನವೂ ಆಗಿರುತ್ತದೆ. ಪ್ರತ್ಯೇಕತೆಯ ವಿಚಾರವಾದರೆ ಮನುಷ್ಯ ತನ್ನ ನಡುವೆ ಜಾತಿ-ಮತ, ಧರ್ಮ, ದೇಶಗಳ ಹೆಸರಿನಲ್ಲಿ ನಿರ್ಮಿಸಿಕೊಂಡ ಪ್ರಭೇದಗಳ ಸಂಕೇತವಾಗಿ 'ಗೋಡೆ' ನಿರೂಪಣೆಗೊಳ್ಳುತ್ತದೆ. ಆದರೆ ಗೋಡೆ ವಿಭಿನ್ನತೆಯ ಸಂಕೇತವಾಗುವುದರೊಂದಿಗೆ ಸುರಕ್ಷತೆಯ ಉಪಾಯವೂ ಆಗಿ ಅಗತ್ಯತೆಯ ತರ್ಕವನ್ನು ಮತ್ತೊಬ್ಬ ರೈತನಿಂದ ಹೇಳಿಸುತ್ತದೆ.

ಇಷ್ಟೆಲ್ಲ ಆಲೋಚನೆಗಳ ನಡುವೆ ಕವಿ ಆ ರೈತನಿಗೆ ಕೆಲವು ಪ್ರಶ್ನೆಗಳನ್ನು ಮುಂದಿಡುತ್ತಾನೆ. ಗೋಡೆಯ ಅವಶ್ಯಕತೆ ಏನು? ಗೋಡೆ ನಿರ್ಮಿಸುವುದರಿಂದ ಆತ ಏನನ್ನು ಹೊರಗಿಡಬಯಸುತ್ತಾನೆ ಹಾಗೂ ಏನನ್ನು ಒಳಗಿಟ್ಟುಕೊಳ್ಳಬಯಸುತ್ತಾನೆ ?

ಕವಿಯ ಅಭಿಪ್ರಾಯದಲ್ಲಿ ಗೋಡೆ ಸುರಕ್ಷತೆಯ ಹಾಗೂ ಗುರುತಿನ ಸಾಧನವಾಗಿದ್ದರೂ ಸಹ ಅದು ವ್ಯಕ್ತಿಗಳ ನಡುವೆ ಸಂಘರ್ಷಕ್ಕೆ ಎಡೆ ಮಾಡಿಕೊಡುವಂತಹ ಸಂಗತಿಯಾಗುತ್ತದೆ ಹಾಗೂ ಪ್ರತ್ಯೇಕತೆಗಳು ದ್ವೇಷ, ಅಸೂಯೆ ಮತ್ತು ಅಪನಂಬಿಕೆಗಳ ತಳಹದಿಯ ಮೇಲೆ ನಿರ್ಮಾಣಗೊಳ್ಳುತ್ತವೆ. ಈ ಪ್ರಯತ್ನದಲ್ಲಿ ಕೇವಲ ಸ್ವಾರ್ಥಪರತೆಯನ್ನು ಮನುಷ್ಯ ಒಳಗಾಗಿಸಿಕೊಂಡು ಔದಾರ್ಯತೆ, ಪರಸಹಿಷ್ಣುತೆಗಳನ್ನು ದೂರ ಮಾಡಿಕೊಳ್ಳುತ್ತಾನೆ.

ಕವನವನ್ನು ಆಳವಾಗಿ ಓದುತ್ತಾ ಹೋದಂತೆ ಇನ್ನು ಕೆಲವು ತರ್ಕಗಳು ಸಹಜವಾಗಿ ಉದ್ಭವವಾಗುತ್ತವೆ. ಪ್ರತ್ಯೇಕತೆಯ ಅವಶ್ಯಕತೆ ಏನು ಎಂಬುದರಿಂದ ಹಿಡಿದು ಭಾಷೆ, ಜಾತಿ, ಧರ್ಮ, ಪ್ರಾಂತ, ದೇಶಗಳವರೆವಿಗೂ ಪ್ರಶ್ನೆಗಳು ಬೆಳೆಯುತ್ತಾ ಹೋಗುತ್ತವೆ ಹಲವೊಮ್ಮೆ ಪ್ರತ್ಯೇಕತೆಗಳು ಪ್ರಕೃತಿ ದತ್ತವಾಗಿದ್ದರೆ ಹಲವೊಮ್ಮೆ ಮಾನವದತ್ತವಾಗಿರುತ್ತವೆ. ಇಂತಹ ಬಿರುಕುಗಳು ಕಾಲನ ತುಳಿತಕ್ಕೆ ಅಥವಾ ಕೃತಕತೆಯ ತುಳಿತಕ್ಕೆ ಸಿಕ್ಕಿ ನಾಶವಾಗಿದ್ದು ಮತ್ತೊಮ್ಮೆ ಅವುಗಳನ್ನು ನಿರ್ಮಾಣ ಮಾಡಿ ಉಳಿಸಿಕೊಳ್ಳುವ ಹಾಗೂ ಬೆಳೆಸಿಕೊಳ್ಳುವ ಔಚಿತ್ಯವಾದರೂ ಏನು ?

ಆದ್ದರಿಂದಲೇ ನೆರೆಯ ರೈತ ಗೋಡೆಯನ್ನು ಪುನರ್‌ನಿರ್ಮಿಸುತ್ತಿರುವ ರೀತಿಯನ್ನು ಕಂಡು ಕವಿ ಅಪಹಾಸ್ಯ ಮಾಡುತ್ತಾನೆ. ಅವನೊಬ್ಬ ಆಯುಧಧಾರಿ ಶಿಲಾಯುಗದ ಅನಾಗರೀಕನೆಂದು ಬಣ್ಣಿಸುತ್ತಾನೆ ಅಷ್ಟೇ ಅಲ್ಲದೆ ಅವನು "ಕತ್ತಲೆಯಡೆಗೆ" ನಡೆಯುತ್ತಿರುವ ರೀತಿಯನ್ನು ಅತ್ಯಂತ ಮೂಢತನವೆಂದು ಹೇಳುತ್ತಾನೆ ಇಷ್ಟೆಲ್ಲಾ ತರ್ಕ ನಡೆದರೂ ಆ ಮೊಂಡು ರೈತ ತನ್ನಪ್ಪ ಹೇಳಿಕೊಟ್ಟ ಪಾಠ ಎಂದು ಅದನ್ನು ಎಂದೂ ಮೀರಲಾರೆನೆಂದು ಬೊಬ್ಬೆಯಿಡುತ್ತಾನೆ.

ಹೀಗೆ ಬದುಕಿನ ಅನುಭಾವ - ಸ್ವಭಾವ ಕವನ ವಸ್ತುವಾಗಿ ಎರಡು ತರ್ಕಗಳ ನಡುವೆ ಬಿಂಬಿತವಾಗಿದೆ. ಮತ್ತೊಮ್ಮೆ ಕವನ ಓದುವಾಗ ಕವಿ-ಹೊಸ

ಬಿರುಕುಗಳನ್ನು ನಿರ್ಮಿಸಬಾರದು ಹಾಗೂ ಈಗಾಗಲೇ ನಶಿಸಿಹೋಗಿರುವ ಪ್ರತ್ಯೇಕತೆಗಳನ್ನು ಪುನರ್ ಸೃಷ್ಟಿಸಬಾರದು ಎಂಬ ಆಶಯವನ್ನು ನಮ್ಮ ಮುಂದಿಡ ಬಯಸುತ್ತಾನೆ. ಈ ನಕಾರಗಳ ಬಗ್ಗೆ ಮನುಷ್ಯ ಎಂದು ತಿಳುವಳಿಕೆ ಹೊಂದಿ ಅದನ್ನು ಕಾರ್ಯರೂಪದಲ್ಲಿ ತರಬಲ್ಲ ಎಂಬುದು ಸಂದಿಗ್ಧವಾದರೂ ಆಶಾಭಾವನೆಯನ್ನು ಎಂತಹ ಸಮಯದಲ್ಲೂ ತೊರೆಯದಿರುವುದು ಮನುಷ್ಯನ ದೊಡ್ಡಗುಣ ಎಂಬುದರಲ್ಲಷ್ಟೇ ಸಮಾಧಾನ ಹೊಂದಬೇಕಾಗಿದೆ.

ಫ್ರಾಸ್ಟನ ಆಲೋಚನೆ, ಆಕಾಂಕ್ಷೆ. ಆದರ್ಶಗಳು ಎಲ್ಲ ಮಿತಿಯನ್ನು ಮೀರುವಂತದ್ದು. ವಿಶ್ವಭಾವನೆಯ ಗುರಿ ಸಾಧನೆಗೆ ಸಾಂಕೇತಿಕ ರೂಪದ 'ಗೋಡೆ' ಅಡ್ಡವಾಗಿದ್ದು ಅದರ ನಿವಾರಣೆಯೇ ಕವಿಯ ಮಹತ್ವಾಕಾಂಕ್ಷೆ. ವಿಶ್ವಮಾನವ ಭಾವನೆಯನ್ನು ಪ್ರೇರೇಪಿಸುವಂತಹ ಕವನಗಳ ಮೂಲಕ ಸಾರ್ವಕಾಲಿಕತೆಯನ್ನು ಪಡೆದುಕೊಂಡು ಸಮಸ್ಯೆಗಳ ನಿರಂತರತೆಯನ್ನು ಫ್ರಾಸ್ಟ್ ಮಾನವ ಜನಾಂಗಕ್ಕೆ ನೆನಪಿಸುತ್ತಾನೆ.

ರಾಬರ್ಟ್ ಫ್ರಾಸ್ಟ್-ಪೌಂಡ್, ಎಲಿಯಟ್‌ರಂತೆ ಕಾವ್ಯ ಸಿದ್ಧಾಂತಗಳ ಮೂಲಕ ತನ್ನನ್ನು ಸಮರ್ಥಿಸಿಕೊಳ್ಳಬಯಸುವುದಿಲ್ಲ. ಆದರೂ ಅವನ ಪ್ರಬಂಧವಾದ "The Figures a poem Makes" ನಲ್ಲಿ ಕೆಲಮಟ್ಟಿಗೆ ಕಾವ್ಯಗುಣಗಳ ಬಗ್ಗೆ ತನ್ನ ಅಭಿಪ್ರಾಯಗಳನ್ನು ಮಂಡಿಸುತ್ತಾನೆ. "ಕವನ ಎಂಬುದು ಸಂತೋಷಕರ ಆರಂಭ ಹೊಂದಿದ್ದು ವಿವೇಕ-ಸಿದ್ಧಾಂತಗಳ ಅಂತ್ಯದಲ್ಲಿ ಪಲ್ಲವಿಸಬೇಕು" ಎಂದು ಒಂದೆಡೆ ಹೇಳಿದರೆ ಮತ್ತೊಂದೆಡೆ 'ಕವನವು ಮೇಲುಸ್ತರದಲ್ಲಿ ಒಂದು ಅರ್ಥವನ್ನು ಹೇಳುತ್ತಿರುವಂತೆಯೇ ಅಂತರಾಳದಲ್ಲಿ ಹಲವು ನಿಗೂಢಾರ್ಥಗಳ ಸಂಯೋಜನೆಯಲ್ಲಿ ಧ್ವನಿಸಬೇಕು' ಎಂದು ಪ್ರತಿಪಾದಿಸುತ್ತಾನೆ. ಈ ವ್ಯಾಖ್ಯಾನಗಳನ್ನು Mending Wall ಕವನದಲ್ಲಿ ಆದ್ಯಂತವಾಗಿ ಕವಿ ನಿರೂಪಿಸಿದ್ದಾನೆಂದು ಬೇರೆ ಹೇಳಬೇಕಿಲ್ಲ.

○ **ಸಿ. ಎಸ್. ನಾಗರಾಜ್**

ಕುತರ್ಕ ವಿದ್ವಾಂಸರಲಿ ಬೇಡ
ಕುಚೋದ್ಯ ಹಿರಿಯರಲಿ ಬೇಡ
ಕುಡುಕನನು ಕೆಣಕ ಬೇಡ ದತ್ತಣ್ಣ

ಕತ್ತೆಗೆ ಬತ್ತದಾ ಬೆಲೆ ಗೊತ್ತುಂಟೆ ?
ಉಪ್ಪಿನಾರುಚಿ ತುಪ್ಪ ಕೊಡುವುದುಂಟೆ ?
ಮೂರ್ಖರಿಗೆ ಬುದ್ಧಿ ಮಾತಲ್ಲಿ ಹಿತವುಂಟೆ ? ದತ್ತಣ್ಣ

– ದತ್ತಣ್ಣ

# ಕನಸುಗಳು

ಕನಸುಗಳ ಕಂತೆಯು ಕಟ್ಟಿದ,
ನಂಬದ ನಂಗೆ ಕನಸು ಬೀಳ್ತಾವೆ
ಹೊತ್ತಾರೆ ವೈನಾದ ಕನಸು.

ತಿರುಕನಾ ಕನಸಿನಾಗೆ, ಆನೆ ಹೂ–
ಮಾಲೆ ಹಾಕಿದಂತ ಕನಸು, ರಾತ್ರೋ–
ರಾತ್ರಿ ತಿರುಕ ರಾಜನಾದ ಕನಸಿನಾಗೆ.

ಉಣ್ಣಾಕೈ, ತಿನ್ನಾಕೈ, ಉಡಾಕೈ
ಇಲ್ಲದ ನಂಗೆ, ಸೂರು–ಪಾರಿಲ್ಲದನಂಗೆ
ಸುಂದರ ಕನಸು ಬೀಳ್ತಾವೆ.

ಇವಾನದಾಗೆ ದೇಸ ಸುತ್ತಿದ ಕನಸು !
ಕಣ್ಣು ಮುಚ್ಚಿದಾಗ ಕಣ್ಣಿಗಂದದ ಕನಸು
ಕಣ್ಣು ಬಿಟ್ಟರೆ ಕನಸಿನ ಬಣ್ಣ ಬಟ್ಟಂ ಬಯಲು

ಕನಸ ನಂಬದ ನಂಗೆ ಕನಸು ಬೀಳ್ತಾವೆ
ಕನಸು ನನಸಾಗತದ ಅಂತಾರ ಮಂದಿ
ಬೆಳಗಿನ ಕನಸು ನೂರಕ್ಕೆ ನೂರರಷ್ಟು ದಿಟವಂತೆ

ಕನಸ್ನಾ ನಂಬದ ನಂಗೆ ಬಣ್ಣ -
ಬಣ್ಣದ ಬಂಗಾರದ, ರಂಗು-ರಂಗಿನಾ
ಕನಸ್ಯಾಕೆ ಬೀಳ್ತಾವೆ ?

ಅದು ಬೀಳಲಿ ಅವರಿವರ
ಹೆಂಡಿರ ತಲೆ ಹಿಡಿದು
ಬಂಗಲೆಯಲಿ ಬದುಕುವವರಿಗೆ,

ಹಾಡ ಹಗಲಾಗೆ ಕಪ್ಪುಮಂದಿಯ ಕೊಂದು
ಕಪ್ಪನೆ ಕೋಟು ಧರಿಸಿ, ಬೆಳ್ಳನೆ ಕಾರಲ್ಹೋಗುವ
ಬಿಳಿ ತೊಗಲಿನ ಜನಕ್ಕೆ. ಬೆಳ್ಳಂಬೆಳಗಿನ ಕನಸು ಬೀಳಲಿ.

ಕನಸಾ ಕಟ್ಟಿಕೊಂಡು ನಾ-ಕಿಸಿಯೋದು
ಅಷ್ಟರಾಗಿದೆ, ನಾ-ಬದುಕಿದ್ದು ಸತ್ತಿದ್ದೀನಿ,
ಅದಕ್ಕೆ, ಬೀಳ್ತಾವೆ ಹಾಳಾದ ಕನಸು.

ನಾಸೀಗ ಬದುಕಿದ್ದು ಸತ್ತಿಲ್ಲ !
ಕನಸುಗಳ ಸಾಯಿಸಿ, ನನಸುಗಳ ಉಳಿಸಿ,
ನನ್ನ ಹುಟ್ಟಿಗೆ ನಾ ಬದುಕಿದೀನಿ.

□ ಎಲ್. ನಾಗಪ್ಪ

## ಸುಳ್ಳು ಹೇಳಲಾರೆ

ಅಯ್ಯಾ ನೀವು ಮೆಚ್ಚುವಿರೆಂದು
ಸುಳ್ಳು ಹೇಳಲಾರೆನಯ್ಯ

ಅಯ್ಯಾ ನೀವು ಚುಚ್ಚುವಿರೆಂದು
ಸುಳ್ಳು ಹೇಳಲಾರೆನಯ್ಯ !

ಅಯ್ಯಾ ನೀವು ಮರುಗುವಿರೆಂದು
ಸುಳ್ಳು ಹೇಳಲಾರೆನಯ್ಯ.

ಅಯ್ಯಾ ನೀವು ಮುನಿಯುವಿರೆಂದು
ಸುಳ್ಳು ಹೇಳಲಾರೆನಯ್ಯ !

ಅಯ್ಯ ನೀವು ಹೊಡೆಯುವಿರೆಂದು
ಸುಳ್ಳು ಹೇಳಲಾರೆನಯ್ಯ,

ಅಯ್ಯಾ ನೀವು ಬಡಿಯುವಿರೆಂದು
ಸುಳ್ಳು ಹೇಳಲಾರೆನಯ್ಯ !

ಅಯ್ಯಾ ನೀವು ಕಚ್ಚುವಿರೆಂದು
ಸುಳ್ಳು ಹೇಳಲಾರೆನಯ್ಯ,

ಅಯ್ಯಾ ನೀವು ಕಡಿಯುವಿರೆಂದು
ಸುಳ್ಳು ಹೇಳಲಾರೆನಯ್ಯ !

ಅಯ್ಯಾ ನೀವು ಕೊಲ್ಲುವಿರೆಂದು
ಸುಳ್ಳು ಹೇಳಲಾರೆನಯ್ಯ,

ಅಯ್ಯಾ ನೀವು ಕೊಚ್ಚುವಿರೆಂದು
ಸುಳ್ಳು ಹೇಳಲಾರೆನಯ್ಯ !

ಅಯ್ಯಾ ನಮ್ಮ 'ಬಸವ ಪ್ರಿಯ–
–ಕೂಡಲ ಸಂಗಮ ದೇವ '

ನುಡಿಸಿದಂತೆ ನುಡಿವೆನಲ್ಲದೆ
ಅನ್ಯವ ನುಡಿವೆನೆ ಅಯ್ಯ ! ?

□ **ಶ್ಯಾಮಸುಂದರಕೋಚಿ**

## ನಿರೀಕ್ಷೆ

ಬೆಳ್ಳಂಬೆಳಕಿನಲ್ಲಿ ಹಾದಿಯುದ್ದ
ಹಾಯುತ್ತಿತ್ತು ಕಣ್ಣು
ಹರಿಯುತ್ತಿತ್ತು ಭಾವ, ನೋವ
ನುಂಗುತ್ತಿತ್ತು ಜೀವ

ಕಣ್ಣು ನೋಯುವವರೆಗೆ
ಕತ್ತು ಬಾಗುವವರೆಗೆ
ನೋಡಿಯೇ ನೋಡಿದ
ಬೆಳಕೆಲ್ಲ ಕತ್ತಲಿನ
ಒಡಲಾಳದಲ್ಲಿ ಕರಗಿ
ಬಾಳ ಹಾದಿಯಂತೆ
ಕಗ್ಗತ್ತಲಾಗಿ ಬಿಟ್ಟಿತ್ತು
ಕಣ್ಣೋಟ ಮಸುಕಾಗಿ
ಕಟ್ಟಿಂಗಳಲ್ಲಿ ಮಿಂದಂತಾಯ್ತು
ನಲ್ಲ ಬರಲಿಲ್ಲ ನನ್ನ ನಲ್ಲ ಬರಲಿಲ್ಲ

ಭುಗಿಲೆದ್ದ ಭಾವನೆಗಳೆಲ್ಲ
ವಿರಹದಗ್ನಿಯಲಿ ಉರಿದು
ಕಿಡಿಗೆದರಿ ಅಂತರಾಳದ
ತಂತುಗಳನೆಲ್ಲಾ ಬೇಯಿಸಿ
ಎದೆಯೊಳಗೆಲ್ಲಾ ಜ್ವಾಲಾಮುಖಿಯ
ಲಾವಾರಸವನ್ನೆರಚಿ
ಇಟ್ಟಾಡಿಸುತ್ತಿದ್ದರೂ
ಕತ್ತಲಾಳದಲ್ಲೇ

ಏನನ್ನೋ ಹುಡುಕುವಂತೆ
ಕುರುಡಿಯಂತೆ ತಡಕಿದೆ
ಹೆಳವಿಯಂತೆ ತೆವಳಿದೆ
ಹಾದಿ ಬರೀ ಹಾದಿ
ನೋಟದುದ್ದಕ್ಕೂ ಸತ್ತಂತೆ
ಬಿದ್ದಿತ್ತು ಕಣ್ಣಿನಾಳದಲ್ಲಿ
ಎದ್ದ ಗಲ್ಫ್‌ಸ್ಟ್ರೀಂ ಪ್ರವಾಹ
ಕೆನ್ನೆಗಳ ಚುಂಬಿಸಿ ಆರುಹಿತ್ತು
ನಲ್ಲ ಬರಲಿಲ್ಲ - ನನ್ನ ನಲ್ಲ ಬರಲಿಲ್ಲ.

ಕಣ್ಣು ಕುರುಡಾದರೂ
ಬಾಳು ಬರಡಾದರೂ
ನಿರಂತರ ನಿರೀಕ್ಷೆ
ಹತಾಶೆಯ ಪ್ರತೀಕ್ಷೆ
ಅವಿರತವಾಗಿ ನಡೆಯುತ್ತಲೇ
ಒಂದ ಹುಡುಕಾಟ
[illegible]

ಎಂಬ ಅರಿವಿದ್ದರೂ
ಮತ್ತೆ – ಮತ್ತೆ
ಕೆದಕಿ - ಬೆದಕಿ – ಅದರಲ್ಲೇ
ಸತ್ಯವನ್ನರಸುವ
ವ್ಯರ್ಥ ಪ್ರಯತ್ನ
ಕೊನೆಗೊಮ್ಮೆ ಎಲ್ಲವೂ
ನಿಶ್ಚಲ – ನಿಷ್ಫಲ
ನಲ್ಲ ಬರಲಿಲ್ಲ ನನ್ನ
ನಲ್ಲ ಬರಲಿಲ್ಲ

○ **ಪಿ. ಎಸ್. ನಾಗರತ್ನ**

## ನಗರದ ರಾತ್ರಿ

ಆ ನಡು ರಾತ್ರಿಯಲ್ಲಿ
ನಗರ ಬೆಡ್‌ಶೀಟ್ ಹೊದ್ದು ಮಲಗಿತ್ತು
ಹಗಲಿದ್ದ
ವ್ಯವಹಾರವೆಲ್ಲ ಹೂತು ಹೋಗಿತ್ತು

ರಸ್ತೆಯೆಂಬ ಸೀಳುದಾರಿಯ ಮಗ್ಗುಲಲ್ಲಿ
ಕಾಂಪೌಂಡಿನ ಮನೆಗಳು, ಕಿಟಕಿಗಳು
ಮೌನದಲ್ಲಿ ಹರಟುತಿದ್ದವು,
ನನ್ನ ಕಂಡು ನಾಯಿ ಬೊಗಳುತಿದ್ದವು
ಕಚ್ಚಿರಲಿಲ್ಲ !
ಆದರೂ
ನಾಲ್ಕು ಜನರ ರಾತ್ರಿವ್ಯಾಪಾರಿ ಗುಂಪು
ನನ್ನ ಮುತ್ತಿತ್ತು
ನಾಲ್ಕು ಮೆತ್ತಿತು !

ನೋವಿಗೆ ಕಿರಿಚಿದ್ದೆ
ಗೋಡೆಗಳ, ಕಿಟಕಿಗಳ
ಮೌನದ ಮಾತಿಗೆ ಪೆಟ್ಟಾಗಿ
ಮಾತು ನಿಂತವು.

ಅರೆ ಪ್ರಜ್ಞೆ ಇರುವಾಗಲೆ
ಕಿಟಕಿಗಳಲ್ಲಿ ಮಿಣುಕಿ-ಮಿಂಚಿ ಬೆಳಕು ಹತ್ತಿತು
ಅಸ್ಪಷ್ಟ ತಲೆಗಳು ಗಾಜಿನ ಹಿಂದೆ ನಿಂತವು

ಆ ತ್ರಲೆಗಳು ಬಾಗಿಲು ತೆರೆಯುವುದಿಲ್ಲವೆಂದು ಗೊತ್ತಿತ್ತು
ಕಿಟಿಕಿ ಬಾಗಿಲ ತರೆದು ನೋಡುವ ನಂಬಿಕೆಯಿತ್ತು
ಹಾಗಾಗಲಿಲ್ಲ
ಗಾಜು ಪಾರದರ್ಶಕವಲ್ಲವೆ,
ಕಾಣುತ್ತಿದ್ದೆವು
ಬಿದ್ದಿದ್ದೆ ನಾನು, ಹೋಗುತಿದ್ದರು ಅವರು.

○ ಪಿ. ಮಂಜುನಾಥ್

## ನಿಮ್ಮೊಂದಿಗೆ,

### ವಿಷ ಗಾಳಿಯ ನಡುವೆ... ... ... ... ... ...

'ಸಾಂಸ್ಕೃತಿಕ' ಮತ್ತು 'ರಾಜಕೀಯ' ಪರಸ್ಪರ ಪ್ರಭಾವ ಬೀರಬಲ್ಲ ನಿಕಟ ಸಂಬಂಧವುಳ್ಳ ಕ್ಷೇತ್ರಗಳು. ಆದರೆ ಈಗ ಇದೆಲ್ಲಾ ಸುಳ್ಳು ಎನಿಸುತ್ತಿದೆ. ಎಲ್ಲಿದೆಯಲ್ಲೂ ಹಿಂದೆಂದೂ ಕಂಡರಿಯದಷ್ಟು ಕೆಟ್ಟ ಸ್ಥಿತಿ ನಿರ್ಮಾಣವಾಗಿದೆ, ನಿಜ ನ್ಯಾಯಗಳು ಅಸಹಜವೆನಿಸುತ್ತಿವೆ. ಅನಿಸಿದ್ದನ್ನು ವ್ಯಕ್ತಪಡಿಸಿ ಬದುಕುವುದು ಅಪಾಯಕಾರಿ ಎಂದೇ ಎಲ್ಲರೂ ನಂಬುವಂತಾಗಿದೆ.

ಪ್ರಜಾಪ್ರಭುತ್ವ ದಿನಕಳೆದಂತೆ ಪಕ್ವಗೊಂಡು ಉನ್ನತಿಗೆ ಸಾಗಬೇಕು. ಆದರೆ ಇಲ್ಲೀಗ ಆಗುತ್ತಿರುವುದೇನು? ಅಭಿವ್ಯಕ್ತಿ ಸ್ವಾತಂತ್ರ್ಯದಂತ ಕನಿಷ್ಟ ಅವಕಾಶವೂ ಸ್ಮಶಾನ ಸೇರುತ್ತಿದೆಯಷ್ಟೆ. ಕಂಜನಹಳ್ಳಿ ಗಂಗಾಧರಮೂರ್ತಿ ಕೊಲೆಯಾಗಿರುವುದು ಇದೇ ಕಾರಣಕ್ಕಾಗಿ. ನಾವು ಇಂಥ ಕೊಲೆಗಳನ್ನು ಬಹುಬೇಗ ಇತಿಹಾಸಕ್ಕೆ ಸೇರಿಸಿ, ಹಾಡಿ ಹೊಗಳಿ ಮರೆಯಲೆತ್ನಿಸುತ್ತೇವೆ. ಹಾಗಾಗಿಯೇ ಈ ಕೊಲೆಗಳ ಸರಮಾಲೆ ಮುಂದುವರಿಯುತ್ತಲೇ ಇರುತ್ತದೆ ಇವು ಹಳೆಯ ಕೊಲೆಗಳಾಗುತ್ತಾ ಹೋಗುತ್ತವೆ. ಗಾಂಧಿ ಕೊಲೆಯನ್ನು 'ಹಳೆಯ ಕೊಲೆ' ಎಂದೂ 'ಅನಿವಾರ್ಯ ಕೊಲೆ' ಎಂದೂ ಅರ್ಥೈಸುವ ಈ ದೇಶದಲ್ಲಿ ಪ್ರಜಾಸತ್ತಾತ್ಮಕ ವ್ಯವಸ್ಥೆ ಇದೆಯೇ ?

ನಾಟಕಕಾರ ಸಫ್ದರ್ ಹಷ್ಮಿ, ಕಾರ್ಮಿಕ ನಾಯಕ ಗುಹಾನಿಯೋಗಿ, ಅಧ್ಯಾಪಕ ಪ್ರೊ॥ ಶೇಷಾದ್ರಿ ಇವರೆಲ್ಲರ ಕೊಲೆಗಳು ಈಗ ನೆನಪುಗಳು. ಇಂತಹ ಬಲಿಗಳಿಗೆ ಬೆಲೆ ಇಲ್ಲದಂತಹ ಪರಿಸ್ಥಿತಿ ವ್ಯವಸ್ಥೆಯ ಪತನದ ಸೂಚನೆಯಷ್ಟೆ.

ಕೊಲೆಗಡುಕರ ವಿರುದ್ಧವಾಗಿ ಅದೆಷ್ಟೋ ಪ್ರತಿಭಟನೆಗಳು, ಮೆರವಣಿಗೆಗಳು ವಿವಿಧ ಸಂಘಟನೆಗಳಿಂದ ಆಗಿವೆ. ಆದರ ಕೊಲೆಗಡುಕರು ಮತ್ತು ಅವರ ಪೋಷಕರು ತಮ್ಮಿಷ್ಟಕ್ಕೆ ತಾವು ರಾಜಾರೋಷವಾಗಿ ತಮ್ಮ ಕೆಲಸ ಮುಂದುವರಿಸಿದ್ದಾರೆ ಗಂಗಾಧರಮೂರ್ತಿ ಕೊಲೆಯು ಅಪಾರ ಜನರ ನೋವಿಗೆ ಕಾರಣವಾಗಿ ಪ್ರತಿಭಟನೆ ಸ್ಫೋಟಗೊಂಡಿದೆ. ಆದರೆ ಇಲ್ಲಿ ಒಂದು ಚಿಂತಿಸಬೇಕಾಗಿದೆ. ಸಫ್ದರ್ ಹಷ್ಮಿ ಕೊಂದವರು ಗುಹಾನಿಯೋಗಿ ಕೊಂದವರು ಈಗ ಗಂಗಾಧರಮೂರ್ತಿ ಕೊಲೆಯ ಬಗ್ಗೆ ವಿಚಾರಿಸಿ ತೀರ್ಮಾನಕ್ಕೆ ಬರಲಿದ್ದಾರೆ! ನ್ಯಾಯನಿರ್ಣಯಕರು ಆಳುವವರು ಇವರ.

ಹೀಗಿರುವಾಗ "ಮನಸ್ಸು" "ಹೃದಯ" ಕಳಕೊಂಡ ರಾಜಕೀಯ ಪಕ್ಷಗಳ ಎದುರು ಕೇವಲ ಪ್ರತಿಭಟನೆ ಮೆರವಣಿಗೆಗಳಿಂದ ಮಾತ್ರ ತೀವ್ರ ಪರಿಣಾಮ ಉಂಟಾಗುವುದೆಂಬ ನಂಬಿಕೆ ತನ್ನ ಶಕ್ತಿ ಕಳೆದುಕೊಂಡಿದೆ.

ಕೊಲೆಯಾದ ವ್ಯಕ್ತಿಗಳ ಹಿಂದೆ ಅತ್ಯಂತ ಬಲವಾದ ಜನಪರ ಸಂಘಟನೆಗಳು ಇದ್ದು ಅವರಿಗೆ ನ್ಯಾಯ ಕೊಡಿಸುವುದು ಸಾಧ್ಯವಾಗಿಲ್ಲ ಯಾಕೆ ಎಂಬುದನ್ನು ತೀವ್ರವಾಗಿ ಪರಿಗಣಿಸಬೇಕಾಗಿದೆ. ಜನಸಾಮಾನ್ಯರ ಪಾಡಿನ ಬಗ್ಗೆ ಕೂಡ ಈಗ ತೀವ್ರ ಯೋಚಿಸಬೇಕಾಗಿದೆ.

ಈಗಲೂ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅಚಲ ನಂಬಿಕೆಯುಳ್ಳ ಬೇರೆ ಬೇರೆ ಕ್ಷೇತ್ರಗಳಲ್ಲಿ ತೀವ್ರವಾಗಿ ತೊಡಗಿಕೊಂಡಿರು ವ್ಯಕ್ತಿಗಳು, ತಮ್ಮ ಸ್ವಪ್ರತಿಷ್ಠೆ ಕಟ್ಟಿಟ್ಟು ಕಳ್ಳಕಾಕರ, ಕೊಲೆಗಡುಕರ, ವಿರಪ್ಪನ್‌ಗಳ ಆಳ್ವಿಕೆ ವಿರುದ್ಧ ಪರ್ಯಾಯ ರಾಜಕೀಯ ಶಕ್ತಿಯನ್ನ ಸಂಘಟಿಸುವುದನ್ನು ಬಿಟ್ಟು ಈಗ ಬೇರೆ ಮಾರ್ಗವೇ ಇಲ್ಲ. ಸಾಂಸ್ಕೃತಿಕ ವಾತಾವರಣದ ಆರೋಗ್ಯ ಮತ್ತು ರಾಜಕೀಯ ವ್ಯವಸ್ಥೆಯ ಆರೋಗ್ಯ ಎರಡರ ರಕ್ಷಣೆಗೆ ಒಂದೇದಾರಿ.

ಸಫ್ದರ್ ಹಷ್ಮಿಯವರ ಕೊಲೆಯಾದಾಗ ತಮಸ್ ಖ್ಯಾತಿಯ ಲೇಖಕ (ಅದೇ ಸಂದರ್ಭದಲ್ಲಿ ಧಾರವಾಡದ ಪ್ರೊ. ಶೇಷಾದ್ರಿಯವರ ಕೊಲೆಯಾಗಿತ್ತು. ಆಗ ಭೀಷ್ಮ ಸಹಾನಿ ಅಲ್ಲಿಗೆ ಬಂದಿದ್ದರು.) ಭೀಷ್ಮಸಹಾನಿ ವ್ಯಕ್ತಪಡಿಸಿದ ಅಭಿಪ್ರಾಯಗಳು ಎಂದೆಂದಿಗೂ ಮುಖ್ಯವಾಗುತ್ತವೆ. ಆದ್ದರಿಂದ ಈ ಸಂಚಿಕೆಯಲ್ಲಿ ಅವರ ಅಭಿಪ್ರಾಯ ವನ್ನು ಮುದ್ರಿಸಲಾಗಿದೆ. (ಕೃಪೆ : ಸಮುದಾಯ, ಧಾರವಾಡ)

**ಕೆಳಗುರುಳಿದ ಅಡಿಗರ ಲೇಖನಿ**

ನವ್ಯಕಾವ್ಯದ ಮೂಲ ಸೆಲೆ ಎಂ. ಗೋಪಾಲಕೃಷ್ಣ ಅಡಿಗರು ನಿಧನರಾಗಿದ್ದಾರೆ ಆಧುನಿಕ ಕನ್ನಡ ಕಾವ್ಯ ಪರಂಪರೆಗೆ ಹೊಸ ಆಯಾಮ ಒದಗಿಸಿ ಕನ್ನಡ ಭಾಷೆಯ ಅರ್ಥವನ್ನು ಹಿಗ್ಗಲಿಸಿ ಅದನ್ನು ಶ್ರೀಮಂತಗೊಳಿಸಿದ ಅಡಿಗರು ದೊಡ್ಡಕವಿ. ಇವರ ಸೈದ್ಧಾಂತಿಕ ಮತ್ತು ರಾಜಕೀಯ ನಿಲುವುಗಳೇನೆ ಇರಲಿ, ಮುಖ್ಯವಾಗಿ ಬದುಕಿಗೆ, ಕಾವ್ಯ ಧರ್ಮಕ್ಕೆ ಬದ್ಧರಾಗಿ ಕಾವ್ಯಕಟ್ಟಿ ಕನ್ನಡ ಕಾವ್ಯಕ್ಕೂ ಮೆರುಗುಕೊಟ್ಟರು. ಆಧುನಿಕ ಕನ್ನಡ ಕಾವ್ಯ ಭಾಷೆಯ ಶಕ್ತಿ ಮತ್ತು ಸಾಧ್ಯತೆಗಳನ್ನು ಮೊಟ್ಟ ಮೊದಲಿಗೆ ಸಮರ್ಥವಾಗಿ ತಮ್ಮ ಕಾವ್ಯದ ಮೂಲಕ ತೋರಿಸಿಕೊಟ್ಟವರು ಅಡಿಗರು.ನವೋದಯ ಕಾವ್ಯದ ಅತಿ ಭಾವುಕತೆ ಮತ್ತು ಅತಿಭಾಷಾ ಮಡಿವಂತಿಕೆಯನ್ನು ಮೀರಿ ಬರೆದ ಅಡಿಗರು ಒಂದು ಹಂತದಲ್ಲಿ ಅವುಗಳ ವಿರುದ್ಧ ಬಂಡಾಯ ಹೂಡಿದರೆನ್ನಬಹುದು.

ಆಧುನಿಕ ಕನ್ನಡ ಕಾವ್ಯ ನೀರಸ ಹಂತ ತಲುಪಿ ಸಾಯುತ್ತಿದ್ದಾಗ ಅಡಿಗರು ಕನ್ನಡ ಕಾವ್ಯದ ಮೇಲೆ ತಮ್ಮ ಹೊಸ ಛಾಪು ಒತ್ತಿ ಚೈತನ್ಯ ತುಂಬಿದರು. ಇಪ್ಪತ್ತನೇ ಶತಮಾನದ ವಿಜ್ಞಾನ ಮತ್ತು ತಂತ್ರಜ್ಞಾನದ ಪ್ರಭಾವಕ್ಕೊಳಗಾಗಿ ಗೊಂದಲಕೊಂಡ ಸಮಾಜ ಮತ್ತು ಸಂಕೀರ್ಣಗೊಂಡ ಮನುಷ್ಯನ ಭಾವನೆಗಳನ್ನು ಕಾವ್ಯ ಭಾಷೆಯಲ್ಲಿ ಸಮರ್ಥವಾಗಿ ಹಿಡಿದಿಡುವ ಪ್ರಯತ್ನದಲ್ಲಿ ಅಡಿಗರು ಹೊಸ

ಮಾರ್ಗ ಸೂಚಿಸಿದರು. ಆನಂತರದ ನವ್ಯ ಕಾವ್ಯ ವ್ಯಕ್ತಿ ನೆಲೆಗೆ ನಿಂತು, ಕಾಮದಲ್ಲಿ ಕೇಂದ್ರೀಕೃತವಾಗಿ ಕೇವಲ ನಗರ ಜೀವನಕ್ಕೆ ಸೀಮಿತಗೊಂಡು ತನ್ನ ಮಹತ್ವ ಕಳೆದುಕೊಂಡದ್ದು ಬೇರೆ ಮಾತು. ನಾನು ಹಿಂದೂ, ನಾನು ಬ್ರಾಹ್ಮಣ ಎಂದು ಬರೆದ ಆರ್. ಎಸ್. ಎಸ್. ನಂತಹ ಸಂಘಟನೆ ಸಂಪರ್ಕ ಹೊಂದಿದ್ದ ಅಡಿಗರನ್ನು ಒಪ್ಪದಿರ ಬಹುದು, ಆದರೆ ಅಡಿಗರ ಕಾವ್ಯವನ್ನು ಸಾರಾ ಸಗಟಾಗಿ ತಿರಸ್ಕರಿಸುವುದು ಯಾರಿಗೂ ಸಾಧ್ಯವಿಲ್ಲ.

ಅಡಿಗರನ್ನು ಒಡಲಾಳ ಗೌರವದೊಂದಿಗೆ ನೆನೆಯುತ್ತದೆ.

□ ಕೃಷ್ಣಮೂರ್ತಿ ಬಿಳಿಗೆರೆ

## ಬೆಳಕನಾಡಿಗೆ

ಇತ್ತೀಚೆಗೆ ನಗುವ ಗೋರಿಗಳ
ಕಂಡರೆ ನನಗೆ ನಿನ್ನ ನೆನಪು
ನಿನ್ನ ನಿಡಿದಾದ ಬಿಳಿ ಉಡುಪಿನಲಿ
ತೋಳುಗಳಿಂದ ಕಾಲುಗಳಿಂದ
ಸಾವಿರ ಸಾವಿರಗಟ್ಟಲೆ ತಣ್ಣನೆ
ಉಸಿರುಗಳು, ಉಸಿರಿಗಾಗಿ ಚಡಪಡಿಸುವುದನ್ನು
ಕಂಡಿದ್ದೇನೆ
ಹಾಗೆಯೇ ನಿನ್ನ
ಆರೋಗ್ಯವಂತ ನಗುವನ್ನೂ ಕೂಡ.

ಹತಾಶೆಗೊಂಡ ಹೆಣ್ಣುಗಳ ಬಿಕ್ಕುಗಳ ಹಾಗೆ
ಈ ಮುಂಜಾನೆಗಳ ಕಣ್ಣು ಕೆಂಪು
ಸಾಪು ಸಾಪಾಟಾಗಿ ಕಂಪಿಸುತ್ತವೆ
ಬಾಲೆಯರ ನವಿರಾದ ಒಡಲುಗಳು
ರೇಸಿಮೆಯ ಎಳೆಗಳ ಕನಸುಗಳು
ಹಾರಾಡುತ್ತಿವೆ ರೆಕ್ಕೆಯಿಲ್ಲದ ಅಳತೆಗಳಲ್ಲಿ.

ದಿಕ್ಕೆಟ್ಟ ರಾತ್ರಿಗಳ ಹಾಗೆ ಈ ಹೆಣ್ಣುಗಳು
ಬೆಳಕು ಮೂಡುವತನಕ ಗೋರಿಗಳು
ಚಿಲ್ಲಾಪಿಲ್ಲಿ ಬರಡು ಕನಸು ಕಾಮನೆಗಳ
ಸುತ್ತ ಚೆಲ್ಲಿ ಒರಗಿದ್ದಾರೆ
ಬೆಳಕದು ಬರುವವರೆಗೆ ಕಾಯಬೇಕಿನ್ನು
ಬೆಳಕನಾಡಿಗೆ ಹುಟ್ಟು ಹಾಕಲು.

□ ಹೆಚ್. ಎಲ್. ಪುಷ್ಪ

(ಇತ್ತೀಚೆಗೆ ಮುದ್ರಣವಾಗಿರುವ ಹೆಚ್. ಎಲ್. ಪುಷ್ಪಾರವರ
'ಅಮೃತಮತಿ ಸ್ವಗತ' ಸಂಕಲನದಿಂದ)

ಸಂಪಾದಕ ಮಂಡಳಿಯಲ್ಲಿ :

ಕೆ. ಆರ್. ಬಸವರಾಜು

ಕೆ. ದೊರೈರಾಜ್

ಎನ್. ನಾಗಪ್ಪ

ಸಿ. ಕೆ. ಉಮಾಪತಿ

**ವಾರ್ಷಿಕ ಚಂದಾ ೨೫ ರೂ.**

**ಸಾಹಿತ್ಯಾಸಕ್ತ ಗೆಳೆಯರನ್ನೂ ಚಂದಾದಾರರಾಗಿಸಿ**
ವಿಮರ್ಶೆಗೆ ಪುಸ್ತಕ ಕಳಿಸುವವರು ಎರಡು ಪ್ರತಿ ಕಳಿಸಿ,
ಬರಹಗಾರ ಗೆಳೆಯರು ಬರಹಗಳನ್ನು ಕಳಿಸಿ ಸಹಕರಿಸಿ.

ಸಂಪರ್ಕ ವಿಳಾಸ :
**ಕೃಷ್ಣಮೂರ್ತಿ ಬಿಳಿಗೆರೆ**
ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ತುರುವೇಕೆರೆ – ೫೭೨ ೨೨೭.

ಪ್ರಕಾಶಕರು : **ಅಭಿವ್ಯಕ್ತಿ ಬಳಗ, ತಿಪಟೂರು.**

ಶ್ರೀ ಚನ್ನಕೇಶವ ಪ್ರಿಂಟರ್ಸ್, ತುರುವೇಕೆರೆ.

# ಪ್ರೀತಿ ಕುರಿತ ಎರಡು ಕವಿತೆಗಳು

## ಪ್ರೀತಿ

ರೂಪ ಪಡೆಯುವುದು ಪ್ರೀತಿ
ಬಣ್ಣ ಬಣ್ಣಗಳಂತೆ
ಆಮೇಲೆ ರಕ್ತಮಾಂಸಗಳೂ ಸೇರಿ
ಇಳಿಯುತ್ತೆ ಅದು
ಮೂಲೆ ರೂಮಿನ ಹಾಸಿಗೆಗೆ.
ಹಾಸಿಗೆಯ ಉಸಿರು ಕಟ್ಟಿಸಿ
ಕೊನೆಗೆ ಅರೆಮನಸಿನಿಂದ
ಹಾಸುವುದು ಮತ್ತೆ ಸುತ್ತುವುದು.

**ನಿದಾ ಫಜಲಿ**

## ಪ್ರೀತಿ ತತ್ವ

ನದಿಯು ಎದೆಗಪ್ಪುವವು ಕಿರಿ ಹಳ್ಳಕೊಳ್ಳಗಳು
ಸಮುದ್ರವನ್ನ ಬಾಚಿ ತಬ್ಬುವವು
ತುಂಬು ಮನದಿಂದ ನದಿಗಳು
ಗಾಳಿಯದೋ ನಿತ್ಯ ನಿರಂತರ
ಪ್ರೀತಿ ಸಂವಾದ
ಯಾರು ಒಬ್ಬಂಟಿ ಹೇಳು
ಈ ಜಗತ್ತಿನಲ್ಲಿ
ಎಲ್ಲ ಒಬ್ಬರಿನ್ನೊಬ್ಬರೊಳಗೆ
ಹಾಗೆ ನಾನು ನಿನ್ನೊಳಗೆ
ನೋಡು ಆ ಕಡೆ ಪರ್ವತಗಳ ಪ್ರೇಮಲೀಲೆ
ನೋಡು ಈ ಕಡೆ
ಸಮುದ್ರವ ಮುತ್ತಿಡುವ ಅಲೆಅಲೆಯ ಸಾಲೆ.
ಭೂಮಿಗೆ ಮುತ್ತಿಕ್ಕಿದೆ
ಚಿನ್ನ ಸೂರ್ಯನ ಕಿರಣ,
ಮುತ್ತಿಡುವುದು ಸ್ಕುಳ್ಳಿ ಸಾಗರವ
ಚಂದ ಚಂದ್ರನ ಹಾಲು ಬಣ್ಣ
ಹೇಳು ಈಗ
ನೀನು ನನಗೆ ಮುತ್ತಿಕ್ಕದಿದ್ದರೇನು ಬಂತು
ಈ ಮುತ್ತುಗಳಿಗೆಲ್ಲಾ ಅರ್ಥ.

**ಪಿ. ಬಿ. ಷೆಲ್ಲಿ**
ಅನುವಾದ : **ಗಿರಿಯಜ್ಜ**